# ದತ್ತಸಾಹಿತ್ಯ

( ಶ್ರೀ. ಬೇಂದ್ರೆ ಅವರ ಕೃತಿವಿಚಾರಗಳ ಪರಿಚಯ. )

ಸಿಂಪಿ ಲಿಂಗಣ್ಣ

ಸಾಧನ ಮುದ್ರಣಾಲಯ, ಧಾರವಾಡ

೧-೮-೦

ಮುದ್ರಕರು

ಶೇ. ಗೋ. ಕುಲಕರ್ಣಿ

ಸಾಧನ ಮುದ್ರಣಾಲಯ, ಧಾರವಾಡ



ಮಾರಾಟದ ಪೂರ್ಣ ಹಕ್ಕುಳ್ಳವರು

**ಸಾಧನ ಮುದ್ರಣಾಲಯ, ಧಾರವಾಡ**

ಪ್ರಕಾಶಕರು:

ಸಾಧನ ಮುದ್ರಣಾಲಯದ ಪರವಾಗಿ

ಡಾ. ಎಂ. ಗೋಪಾಲಕೃಷ್ಣರಾಯರು

ಕಲಿಯುಗ ಕಾರ್ಯಾಲಯ, ಧಾರವಾಡ

# ನಮ್ಮ ಮಾತು

ಕವಿವರ್ಯ ಶ್ರೀ. ದ. ರಾ. ಬೇಂದ್ರೆಯವರ ೫೦ನೇ ಹುಟ್ಟು ಹಬ್ಬವನ್ನು ಕನ್ನಡ ನಾಡು ಸಾರ್ವಜನಿಕವಾಗಿ ಆಚರಿಸಬೇಕೆಂಬ ಸುದ್ದಿಯನ್ನು ತಿಳಿದು, ಶ್ರೀಯುತರು ಕಳೆದ ೩೦ ವರ್ಷಗಳಿಂದಲೂ ಮಾಡುತ್ತ ಬಂದಿರುವ ಸಾಹಿತ್ಯಸೇವೆಯ ಅಭ್ಯಾಸಕ್ಕೆ ಅನುಕೂಲವಾಗುವದಕ್ಕೆಂದು, ಈ ಹಬ್ಬದ ನಿಮಿತ್ಯವಾಗಿ ಕೆಲವು ಪುಸ್ತಕಗಳ ಯೋಜನೆಯನ್ನು ನಾವು ಮಾಡಿದೆವು. ಅವರ ಫಲವೇ ಈ ಪುಸ್ತಕವು.

ಶ್ರೀಮಾನ್ ಸಿಂಪಿ ಲಿಂಗಣ್ಣನವರು ಕವಿಗಳನ್ನು ಅನೇಕ ವರ್ಷಗಳಿಂದ ಬಲ್ಲವರು. ಅಲ್ಲದೆ ತಾವೂ ಕವಿಗಳೂ ಶ್ರೇಷ್ಠ ಸಾಹಿತಿಗಳೂ ಆಗಿದ್ದಾರೆ. ನಮ್ಮ ಬಿನ್ನಹವನ್ನು ಮನ್ನಿಸಿ ಈ ಪುಸ್ತಕವನ್ನು ಬರೆದು ಕೊಟ್ಟುದಕ್ಕಾಗಿ ನಾವು ಅವರಿಗೆ ತುಂಬ ಉಪಕೃತರಾಗಿದ್ದೇವೆ.

ಇದೇ ಮಾದರಿಯ ಇನ್ನೂ ಬೇರೆ ಪುಸ್ತಕಗಳನ್ನು ಪ್ರಕಟಿಸಬೇಕೆಂಬ ಇಚ್ಛೆ ತುಂಬಾ ಇದೆ. ಕವಿ "ಅಂಬಿಕಾತನಯದತ್ತ"ರನ್ನು ಕುರಿತು ವಿವಿಧ ಕವಿಗಳು ಬರೆದ ಕವನಸಂಗ್ರಹದ ಸಂಕಲನವೊಂದು ಇಷ್ಟರಲ್ಲಿಯೇ ಪ್ರಕಟವಾಗುವದರಲ್ಲಿದೆ.

ಈ ಪುಸ್ತಕಕ್ಕೆ ಬೇಕಾಗಿದ್ದ ಕವಿವರ್ಯರ ಚಿತ್ರ ಒಂದನ್ನು ಒದಗಿಸಿ ಕೊಟ್ಟ ಶ್ರೀಮಾನ್ ಕೋನೇರಿ ಅವರಿಗೂ ಪ್ರಕಾಶನ ಕಾರ್ಯದಲ್ಲಿ ನೆರವಾದ ಡಾ. ಗೋಪಾಲಕೃಷ್ಣರಾಯರಿಗೂ ನಮ್ಮ ಧನ್ಯವಾದಗಳು.

ಈ ಮಾದರಿಯ ಅಭ್ಯಾಸಗ್ರಂಥಗಳು ಹೆಚ್ಚಾಗಿ ಪ್ರಕಟವಾಗಿಲ್ಲ. ಅನುಕೂಲವಾದಂತೆ ಇತರ ಸಾಹಿತಿಗಳನ್ನು ಕುರಿತು ಬರೆದ ಅಭ್ಯಾಸ ಗ್ರಂಥಗಳನ್ನೂ ಕಾಲಕಾಲಕ್ಕೆ ಪ್ರಕಟಿಸಬೇಕೆಂದಿದ್ದೇವೆ.

**ಕೇ. ಗೋ. ಕುಲಕರ್ಣಿ**



ಕವಿವರ್ಯ ಶ್ರೀ ದ. ರಾ. ಬೇಂದ್ರೆ    ೧೭-೨-೧೯೪೭ ನೆಯ ದಿನ ತೆಗೆದ ಚಿತ್ರ

ಓಂ ! ಭಗವತೀ !!

# ದತ್ತ ಸಾಹಿತ್ಯ

## ೧ ಅಂಬಿಕಾತನಯದತ್ತ

### ಧಾರವಾಡದ ಮುಂಬೆಳಗು

ಹತ್ತೊಂಬತ್ತನೇ ಶತಮಾನದ ಕೊನೆಯ ಭಾಗವೆಂದರೆ, ಕನ್ನಡ ನಾಡಿನ ಮುಂಬೆಳಗು. ಕರ್ನಾಟಕಕ್ಕೆ ಮುಸುಕಿದ ಕಾಳರಾತ್ರಿಯ ನಸುಕಿನ ತೆರೆಯು ಸರಿದು, ಕನ್ನಡಿಗರು ಕಣ್ಣೊರಿಸಿಕೊಳ್ಳುತ್ತ ಎಚ್ಚರಿಯುವ ಪ್ರಭಾತಸಮಯ. ಕನ್ನಡ ತಾಯನ್ನು ಕಂಡ ಶಾಂತಕವಿಗಳು "ರಕ್ಷಿಸು ಕರ್ನಾಟಕ ದೇವಿಯೇ" ಎಂದು ಪ್ರಾರ್ಥಿಸಹತ್ತಿದ್ದರು; ಕರ್ನಾಟಕ ಪ್ರಾಣೋಪಾಸಕರಾದ ಆಲೂರ ವೆಂಕಟರಾಯರು "ಕರ್ನಾಟಕ ಗತವೈಭವ"ವನ್ನು ಹೊಗಳಿ ಕನ್ನಡಿಗನ ಭ್ರಮನಿರಸನಗೊಳಿಸುತ್ತ ವಾಯು ಸಂಚಲನ ಸಂಚಲರಾಗಿದ್ದರು. ಡೆಪ್ಯುಟಿ ಚೆನ್ನಬಸಪ್ಪನವರು, ಕಡಪೆ ರಾಘವೇಂದ್ರರಾಯರು ಇಡಿಗನ್ನಡದ ಕನಸುಕಂಡು ಸರ್ವರಿಗೂ ಸಾರಿಹೇಳುತ್ತಿದ್ದರು. ಮುದವೀಡು ಕೃಷ್ಣರಾಯರಂಥವರು ಕನ್ನಡದ ಕಹಳೆಯನ್ನು 'ಕರ್ನಾಟಕ ವೃತ್ತ'ದಲ್ಲಿ ಊದುತ್ತಿದ್ದರು. ಇಂದು ಕನ್ನಡದ ಗಂಡು ಮೆಟ್ಟಾಗಿರುವ ಧಾರವಾಡವು ಅಂದು ಮರಾಠಿಯ ಮನೆಯಂಗಳವಾಗಿತ್ತು. ಕನ್ನಡ ಪುರುಷನು ತನ್ನತನದ ಅರಿವಿಲ್ಲದ ಮಬ್ಬಿನಲ್ಲಿ ಸಕ್ಕರೆಯನಿದ್ದೆಯನ್ನು ಸವಿಯುತ್ತ ಅಲಸಿಗನಾಗಿ ಬಿದ್ದುಕೊಂಡಿದ್ದನು. ಕನ್ನಡಿಗರ ಒಳಗೂ ಹೊರಗೂ ದಟ್ಟಯಿಸಿದ ಆ ಕಗ್ಗತ್ತಲೆಯಲ್ಲಿ ಆ ಪ್ರಾರ್ಥನೆ, ಆ ಹೊಗಳಿಕೆ, ಆ ಆಕಳಿಕೆ, ಆ ಮೊಳಗು ಸಾಕಾಗಲಿಲ್ಲ. ಮರಗಟ್ಟಿದ ಕನ್ನಡ ಕಿವಿಗಳಿಗೆ ಅವಾವೂ ಕೇಳಿಸಲೊಲ್ಲವು. ಇನ್ನೇನು ಬೇಕು ?

## ಭಾರ್ಗವೋದಯ

ಅಂಥ ವಿಷಮ ಕಾಲದಲ್ಲಿ ಭಾರ್ಗವಬಿಂದುವೊಂದು ಪೂರ್ವಕ್ಷಿತಿಜದ ಮೇಲೆ ಸಪ್ಪಳಿಲ್ಲದೆ ಅಪೂರ್ವವಾಗಿ ಕಂಗೊಳಿಸಿತು. ಆ ಬಿಂದುವು ಚಿಕ್ಕದಾದರೂ ಚೊಕ್ಕಬೆಳಕಿನದು; ಅದು ಬೆಳಗಿನ ಚಿಹ್ನವನ್ನು ತಂದಿತು; ಸೂರ್ಯದೇವನ ಹಿಂದುಮುಂದಿದ್ದರೂ ಸ್ವತಂತ್ರ ಪ್ರಕಾಶ ಅದಕ್ಕೆ, ಚಂದ್ರನ ಸಹಚರವಾಗಿ ಶುಕ್ಲ ಕೃಷ್ಣ ಪಕ್ಷಗಳನ್ನೂ ಪಡೆದಿತ್ತು. ಹತ್ತೊಂಬತ್ತನೆಯ ಶತಮಾನ ಮುಗಿಯುವದಕ್ಕೂ ಕನ್ನಡಿಗರ ಕಾಳ ರಾತ್ರಿಯು ಕಳೆದು ಬೆಳಗು ಹೊಮ್ಮುವುದಕ್ಕೂ ಮೇಳವಿಸಿತು. ಆಗ ಕಣ್ತೆರೆದೆದ್ದ ಕನ್ನಡಿಗರು "ಇದು ಬರಿಬೆಳಗಲ್ಲೋ ಅಣ್ಣಾ" ಎಂದು ಅಚ್ಚರಿಗೊಂಡರು; "ಪ್ರೀತಿಯಿಂದ ಮೈದೋರಿದ ಶಾಂತರಸ"ದಿಂದ ಸೈಪಟ್ಟರು. ಆ ಭಾರ್ಗವ ಬಿಂದುವೆಂದರೆ ಶ್ರೀ. ದತ್ತಾತ್ರೇಯ ರಾಮ ಚಂದ್ರ ಬೇಂದ್ರೆ ಅವರು.

## ವಾಮನ ಮೂರ್ತಿ

ಶ್ರೀ. ಬೇಂದ್ರೆ ಅವರು ಕಾಣಿಸಲಿಕ್ಕೆ ವಾಮನಮೂರ್ತಿ. ಮಹಾ ರಾಷ್ಟ್ರದ ಚಕ್ರವರ್ತಿಗೆ ಬಲಿಯಾದ ಉತ್ತರ ಕರ್ನಾಟಕ ಭೂಮಿಯನ್ನು ಮೂರುಪಾದಗಳಲ್ಲಿ ಅಳೆದು ಪಾದಾಕ್ರಾಂತ ಮಾಡಬಂದವರು; ಆದರೆ ಚಕ್ರವರ್ತಿಯನ್ನು ಪಾತಾಳಕೊತ್ತಿದವರಲ್ಲ. "ಕನ್ನಡ ಸಾಹಿತ್ಯವನ್ನೇ ಸೌಹಾರ್ದ್ರದ ಪ್ರತಿಬಿಂಬ ಮಾಡಿ, ಕನ್ನಡಿಗರು ಯಾರನ್ನೂ ತಲೆ ಮೆಟ್ಟಲಿಕ್ಕೂ ಇಲ್ಲ; ಯಾರಿಂದಲೂ ತಲೆ ಮೆಟ್ಟಿಸಿಕೊಳ್ಳಲಿಕ್ಕೂ ಇಲ್ಲ ಎಂಬ ಮಾನವಸಹಜ ಸ್ವಾಭಿಮಾನದಿಂದ ಪೌರುಷಕ್ಕೆ ಪ್ರವರ್ತಿಸುವ"ವರು. ಧಾರವಾಡತಾಯಿಯೇ ಅವರನ್ನು ಪಡೆದಳು. "ಧಾರವಾಡದ ತಾಯಿ ನನಗಾಧಾರ ನಿನ್ನದಲ್ಲದಿಲ್ಲ"ವೆಂದಿದ್ದಾರೆ. ಅವರ ಮಾತೃಭಾಷೆ ಮರಾಠಿ. ಆದರೆ "ಕರ್ನಾಟಕದಲ್ಲಿ ಯಾರೇ ಬಂದು ನೆಲೆನಿಂತರೂ ಅವರು ಮಾನವ ಹಿತಬುದ್ಧಿಯಿಂದ ಜನಪದ ಭಾಷೆಯನ್ನೇ ಹೃದಯದ ಭಾಷೆ, ಜ್ಞಾನದ ಭಾಷೆ, ರಾಜಕಾರ್ಯ ವ್ಯವಹಾರದ ಭಾಷೆ, ಧರ್ಮದ ಭಾಷೆ ಮಾಡದಿದ್ದರೆ ಅಷ್ಟು ಮಟ್ಟಿಗೆ ಜನರ ಹಿತದ ವಂಚನೆಯಾಗುವದೆಂಬು

ದನ್ನು" ಅವರು ಮರೆತಿಲ್ಲ. ಈ ವಾಮನಮೂರ್ತಿಗೆ ಮೂರು ಏಕೀಕರಣಗಳು ಬೇಕಾಗಿವೆ—ಕನ್ನಡ ಏಕೀಕರಣ, ಕನ್ನಡಿಗರ ಏಕೀಕರಣ, ಕರ್ನಾಟಕ ಏಕೀಕರಣ. ಈ ಏಕೀಕರಣತ್ರಯಗಳು ಏಕಕಾಲಕ್ಕೆ ಆಗುತ್ತ ಹೋಗಬೇಕು: ಒಂದು ಮೊದಲು ಒಂದು ಹಿಂದೆ ಅಲ್ಲ; ಮಂತ್ರ ಹಾಕಿದಂತೆ ಒಂದು ಕ್ಷಣ ಆಗಿ ಹೋದರಾಗದು. ಹಡೆದ ತಾಯಿಯ ಮೇಲಿನ ಭಕ್ತಿಯೇ ಬಳೆದು ನಾಡತಾಯಿಯ ಭಕ್ತಿಯಾದಂತಿದೆ. ಅವರಿಗೆ ತಾಯಿಯೆಂದರೆ ಬಹುಭಕ್ತಿ; ತಾಯಿಯೆಂದರೆ ದೇವಿ ಅವರ ಪಾಲಿಗೆ; ಕನ್ನಡಾಂಬೆಯೆಂದರೂ ಅಷ್ಟೇ. ಸಾಹಿತ್ಯದೇವಿಯನ್ನು ಪೂಜಿಸುವ ಮಂಗಲಪ್ರಸಂಗಗಳಲ್ಲಿ "ತಾಯಿಗೆ ನಮಸ್ಕಾರ; ಕನ್ನಡಾಂಬೆಗೆ ನಮಸ್ಕಾರ" ಮಾಡಿ ಮುಂದೆ ಸಾಗುವರು. ಅವರು ಎಂ. ಎ. ದವರೆಗೆ ಓದಿದರೂ, ಪುಣೆಯಲ್ಲಿ ಕಲಿತರೂ, ಗಡಿನಾಡಿನಲ್ಲಿ ಪ್ರೊಫೆಸರರಾದರೂ ಅವರ ಕಣ್ಣು ಕನ್ನಡವನ್ನು ಮರೆಯವು; ಕನ್ನಡವನ್ನೇ ಕಾಣುವವು. ಅವರ ಕಣ್ಣೇ ಕನ್ನಡದವಾದ ಮೇಲೆ, ಆ ದೃಷ್ಟಿ ಎತ್ತ ಹೊರಳಿದರೂ ಕಾಣುವುದಕ್ಕೆಲ್ಲ ಕನ್ನಡಕವಚ ತಾನಾಗಿ ಬರುತ್ತದೆ; ಆದರೆ ಅದು ದೃಷ್ಟಿದೋಷವಲ್ಲ; ಸತ್ಯದೃಷ್ಟಿ. ಅವರು ಹದಿನೆಂಟು ವರುಷದವರಾಗಿರುವಾಗಲೇ "ಕರ್ನಾಟಕ ಮಿತ್ರ" ಎಂಬ ಕೈಬರಹದ ಪತ್ರಿಕೆಯನ್ನು ಹೊರಡಿಸಿದವರು. ಮುಂದೆ ಎರಡೇ ವರುಷಕ್ಕೆ ಕವಿತೆ ಬರೆಯಲಿಕ್ಕೆ ಆರಂಭಿಸಿದರು. ಜನಪದ ಸಾಹಿತ್ಯಾಚಾರ್ಯನಾದ ಸರ್ವಜ್ಞ, ನಾದಲೋಲನಾದ ಲಕ್ಷ್ಮೀಶ ಇವರಿಬ್ಬರೂ ಅವರಿಗೆ ಮೊದಲಿನಿಂದಲೂ ಪ್ರೀತಿಯ ಕವಿಗಳು. ಸರ್ವಜ್ಞನ ಆ ಕಿರಿಮಾತು, ಲಕ್ಷ್ಮೀಶನ ಆ ನಾದಶ್ರುತಿ ಇವು ಇಂದಿಗೆ ಅವರ ಕವಿತೆಗಳಲ್ಲಿ ಪರಿಣತಸ್ಥಿತಿಯನ್ನು ಹೊಂದಿರುತ್ತವೆ. ಪುಣೆಯ ಕರ್ನಾಟಕ ಸೋಶಲ್ ಕ್ಲಬ್ಬಿನಲ್ಲಿ (೧೯೧೭) 'ತುತೂರಿ'ಯನ್ನು ಊದಿ, ಡೆಕ್ಕನ ಕಾಲೇಜಿನ ಕನ್ನಡಸಂಘದ ವಾರ್ಷಿಕೋತ್ಸವ ಕಾಲದಲ್ಲಿ ಕನ್ನಡ ಕವಿತೆಗಳನ್ನು ಓದಿದವರು. ಕವಿತೆ ಬರೆಯ ಹತ್ತಿ ಎರಡು ವರುಷ ತುಂಬಿತೋ ಇಲ್ಲವೋ—ಸಾಹಿತ್ಯ ಸಮ್ಮೇಲನ (೧೯೧೮) ವೊಂದರಲ್ಲಿ ಅವರ ಕವಿತೆಗಳನ್ನು ಕೇಳಲು ಎರಡು ಸಂತೋಷ ಕೂಟಗಳಾದವಂತೆ. ಆಗ ಅಲ್ಲಿದ್ದ ಬೆನಗಲ್ ರಾಮರಾಯರೂ, ಆರ್.

ತಾತಾಚಾರ್ಯರೂ ಆದಿಷ್ಟು ಅಕ್ಕರವಟ್ಟಿರಬೇಕು. ಅದಾದ ಕೆಲವು ದಿನಗಳಲ್ಲಿಯೇ ಶಿಕ್ಷಕರಾದರು. ಇವರು 'ಸ್ವಭಾವದಲ್ಲಿ ವೇದಾಂತಿ, ವೃತ್ತಿಯಲ್ಲಿ ಮಾಸ್ತರ' ಎಂದು ಒಪ್ಪಿಕೊಂಡಿದ್ದಾರೆ.

ವಾಮನಮೂರ್ತಿಗೆ "ಮೋಹಕವ್ಯಕ್ತಿತ್ವ, ಸಲಿಗೆಯ ಶೈಲಿ, ಹೂನಗೆ" ಇವೆ; "ಪದ್ಯವನ್ನು ಓದುವಾಗ ತಲೆಗೆ ಹಿಂದುಸ್ತಾನದ ಪಗಡಿಯೊಂದು ಸುತ್ತಿ ನಿಂತ ಅವರ ಆಗಿನ ನಿಲವು ಗಾರುಡಿಗನೊಬ್ಬನ ನಿಲವಿನಂ"ತೆ; ಇನ್ನೊಮ್ಮೆ 'ಮಾಂತ್ರಿಕ'ನಂತೆ ತೋರುತ್ತಾರೆ. "ಕರ್ತೃತ್ವಶಕ್ತಿಯಾಗಲಿ, ವ್ಯವಸ್ಥೆಯಾಗಲಿ ಅವರಲ್ಲಿಲ್ಲ; ಮೀನಮೇಷದ ಮನಸ್ಸು ಇವರದು; ಅನುಮಾನ ಬಹಳವಾದರೂ, ಸದ್ದು ಕೇಳಿದರೆ ಸಾಕು ಚಿಪ್ಪಿನೊಳಗೆ ಸೇರಿಕೊಳ್ಳುವ ಆವೆಯಂತಿದ್ದರೂ, ಕನ್ನಡಕ್ಕೆ ಬೇಂದ್ರೆಅವರೂ ಅವರ ಗುಂಪೂ ಮಾಡಿದ ಸೇವೆ ಮರೆಯಲಾರದ್ದು. ನಾಡಹಬ್ಬ, ಪಂಪೋತ್ಸವ, ಶಾಂತಕವಿಗಳ ದಿನ ಇಂಥವೆಲ್ಲ ಅವರಿಂದಲೇ ಆರಂಭವಾದವು." ಅವರಿಗೆ ವೇದಾಂತದ ಮಿಥ್ಯೆಗೆ ಅಂಜಿಕೆಯಿಲ್ಲವೆಂದೂ, ವ್ಯವಹಾರದ ಸತ್ಯಕ್ಕೆ ಹಂಚಿಕೆಯಿಲ್ಲವೆಂದೂ ಹೇಳುತ್ತಾರೆ. ತಿಥಿವಾರ ನಕ್ಷತ್ರಗಳಿಗೆ ಅವರು ದಾಸರೇನಲ್ಲವಾದರೂ ತಿಂಗಳುಗಟ್ಟಲೆ ಗಡ್ಡ ಬೆಳೆಸಿಕೊಂಡು ಇರುವದರಲ್ಲಿ ಅವರು ಹೆಸರಾದಷ್ಟು ಯಾವಕರ್ಮಠರೂ ಆಗಿಲ್ಲವಂತೆ. "ಮೂರು ತಿಂಗಳ ಗಡ್ಡ; ಟೋಪಿ ಸೊಟ್ಟ; ಅಂಗಿ ಅಂದವಿಲ್ಲ; ಇವರು ಅಂದವಾಗಿ ಬಟ್ಟೆಬರೆ ಹಾಕಿಕೊಂಡಿದ್ದನ್ನು ಯಾರೂ ನೋಡಿಲ್ಲ; ಅಂದವಿಲ್ಲದಿದ್ದರೆ ಅಷ್ಟೆ, ಬೆಳ್ಳಗೆ ಒಗೆದದ್ದಾದರೂ ಇರಲೆನ್ನುವ ಹಟವೂ ಇಲ್ಲ. ಮೊಳಕೈಯಗಲದ ಮಡಿಪಂಚೆ ಉಟ್ಟು ಮೂರುದೇಶ ಸುತ್ತಿಬಂದಾರು, ಅದರ ಪರಿವೆಯೇ ಅವರಿಗಿರುವದಿಲ್ಲ." ಅವಸರದ ಕೆಲಸಗಳನ್ನು ಬದಿಗಿರಿಸಲಿಕ್ಕೆ "ಈ ಹೊತ್ತು ನನಗೆ ಇಂಥ ಗ್ರಹ ಕ್ರೂರ" ಎನ್ನುವವರು. "ಸುಧಾರಕರ ಹಾದಿಯಲ್ಲಿ ಇವರ ಗಾಡಿ ಹಾದಿಲ್ಲ; ಸನಾತನಿಗಳ ಪಟ್ಟಿಯಲ್ಲೂ ಇವರ ಹೆಸರಿಲ್ಲ. ಸುಧಾರಕರ ಸುಳ್ಳಿಗೆ ಇವರು ಸನಾತನಿಗಳು; ಸನಾತನಿಗಳ ತಿಳಿಗೇಡಿತನಕ್ಕೆ ಸುಧಾರಕರು. ಇದೇ ಇವರ ಬಾಳಿನಲ್ಲಿ ಸುಳಿಯುವ ವಿರಸ" ಎಂದು ಕನ್ನಡದ ಕಿಡಿಯಲ್ಲಿ ವರ್ಣಿಸಲ್ಪಟ್ಟಿದೆ. ಇದಕ್ಕೆ ಚಿಕ್ಕಂದಿನ

ಬಡತನವೂ, ಪ್ರಾಯದಲ್ಲಿನ ಪದೇಪದೇ ಒದಗುವ ನಿರುದ್ಯೋಗದ ತ್ರಾಸೂ, ಸಂಸಾರದ ಕಷ್ಟವೂ ಕಾರಣವಿರಬೇಕು. ಅದರ ಪರಿಣಾಮ ವಾಗಿ, ಇವರ ಪಾಲಿಗೆ ಉತ್ಸಾಹದ ಆವೇಶಬಾರದೆ, ಬಂದದ್ದೆಲ್ಲಾ ಬರ ಲೆನ್ನುವ ದಾರ್ಢ್ಯ ಮಾತ್ರ ಬಂತೆನ್ನುವುದು ನಿಜ. "ವಿರಕ್ತಸ್ವಭಾವ, ಮೇಲೆ ವೇದಾಂತದ ಅಭ್ಯಾಸ; ಸಾಲದ್ದಕ್ಕೆ ಸಂಸಾರದಲ್ಲಿ ಕಹಿಗುಟುಕು." ಅವರ ಕವಿತೆಯಾಗಿ ಬಂದ 'ಹುದಗಲಾರದ ದುಃಖ'ವು ಅವರ ಮೋರೆ ಯಲ್ಲಿಯೇ ಕಾಣುತ್ತದೆ. "ಅವರು ಮನಸಾರೆ ನಗುವುದು ಅಪರೂಪ; ನಕ್ಕರೆ ಅಳುಸುಂಗಿ ನಕ್ಕಂತೆ." ಅನುಭವದ ಕಣ್ಣು ಒಳಗೆ ಹೊರಳಿಸಿದೆ. ಮಿತವ್ಯಯ, ದೀರ್ಘದೃಷ್ಟಿ, ಕಾರ್ಯಸಾಧಕತೆಗಳಿಗೆ ಗೋತ್ರಋಷಿಗ ಳಾದ ಕೊಂಕಣಸ್ಥರಲ್ಲಿಯೇ ಹುಟ್ಟಿಬಂದ ಬೇಂದ್ರೆ ಅವರಲ್ಲಿ ಮಿತ ವ್ಯಯವೊಂದೇ ಕಾಣುವದಂತೆ! ಅವರ ದಿಟ್ಟತನವು ಧಾರವಾಡದ ಪ್ರಸಾದ; ಅದರಿಂದಲೇ ಅವರು ಅನಿಸಿದ್ದನ್ನು ಆಡುವರು; ವಾದಕ್ಕೆ ಹಿಂದೆಗೆಯರು. ಬಡವರ ಬಗ್ಗರ ಬರಿ ತುತ್ತಿನ ಚೀಲ ನೋಡಿ ಅವರ ಕರುಳು ಕುದಿದರೂ, ಕಂಡದ್ದನ್ನಾಡಿ ಕೆಂಡವನ್ನೆಬ್ಬಿಸುವರು. ತಾಯಿ ಅವರಿಗೆ ದೇವಿ; ಆಕೆಯೆ ಬಾಳಚುಕ್ಕೆ. ಆದರೆ "ತುಸುಮಟ್ಟಿಗೆ ಏ. ಇ ಕವಿ, ಮುಖ್ಯವಾಗಿ ಶ್ರೀ. ಅರವಿಂದ ಘೋಷ ಅವರ ತತ್ವಗಳೇ ಅವರ ಬಾಳುವೆಗೆ ತಳಹದಿ. ಅವರ ಬಾಳುವೆ ಕಗ್ಗಲ್ಲಕಣಿವೆ; ಅದೊಂದು ಕರ ವಾಳ; ಅಸಿಧಾರಾವ್ರತ.

ಅವರ ಬುದ್ಧಿ ಬಹಳ ಚುರುಕು; ಕೂಲಂಕಷವಾಗಿ ಗುಣದೋಷ ಗಳನ್ನು ಗುರುತಿಸುವ ಕಣ್ಣು, ನಿಷ್ಪಕ್ಷಪಾತವಾಗಿ ನ್ಯಾಯವಾಗಿ ತೂಕ ಮಾಡುವ ವಿವೇಕ; ಕವಿಹೃದಯವನ್ನು ಸರಿಯಾಗಿ ಗ್ರಹಿಸಬಲ್ಲ ಸಹೃದ ಯತೆ, ಅಲ್ಲದೆ ಪ್ರಚಂಡ ತರ್ಕಶಕ್ತಿಯೂ, ತರ್ಕಮಾಡುವ ತಾಳ್ಮೆಯೂ ಉಂಟು. ತುದಿಯಲ್ಲಿ ನಿಂತು ಮಾತಾಡಿದವರನ್ನು, ಬುಡಕ್ಕಿಳಿದು ಪರೀಕ್ಷೆ ಮಾಡುತ್ತಾರೆ; ಬುಡದಿಂದ ಮೊದಲು ಮಾಡಿದರೆ ತುದಿಯವರೆಗೆ ಹತ್ತಿ ಅಲ್ಲಾಡಿಸಿಬಿಡುತ್ತಾರೆ. "ಇವರ ತರ್ಕಕ್ಕೆ ಸುತ್ತಲೂ ಮೊನೆಯೇ; ಚಕ್ರದಂತೆ. ಅದು ಸೋಲು ಗೆಲವುಗಳ ಸಾಧನೆ ಅಲ್ಲ; ಸತ್ಯಾಸತ್ಯಗಳ ಶೋಧನೆ."

ಜ್ಞಾಪಕ ಶಕ್ತಿ ಬಹಳ ಅಗಾಧವಾಗಿದೆ ಅವರಲ್ಲಿ. ಮಾತಿನಲ್ಲಿ ತೂಕ ಹೆಚ್ಚು; ಬಹಳ ಎಚ್ಚರಿಕೆ. ಸರಸಿಯಾದ ಅವರಿಗೆ ಹಾಸ್ಯವು ಈಸುಗುಂಬಳದಂತೆ. ವಿನೋದಪ್ರಿಯರಾದ ಅವರನ್ನು ಅವರ ವಿದ್ಯಾರ್ಥಿಗಳಾದವರು ಹೇಗೆ ಮರೆಯುವರು? ಆಕಳಿಸಿದರೆ ಹೊಟ್ಟೆಯೊಳಗಿನ ನರಗಳ ಲೆಕ್ಕಹಾಕುವವರೂ, ಒಳ್ಳೆಯ ಶಿಕ್ಷಕರೆಂದು ಹೆಸರಾದವರೂ ನಾಲ್ಕೈದು ಸಾರೆ ನೌಕರಿಯಿಲ್ಲದೆ ನಿರುದ್ಯೋಗದಲ್ಲಿ ನರಳಬೇಕಾಯಿತು. ಇಂದು ವಿದ್ಯಾರ್ಥಿಗಳಾದವರು ನಾಳೆ ಗೆಳೆಯರು ಅವರಿಗೆ. ಅಂತೆಯೇ ಗೆಳೆಯರಗುಂಪು ಕಟ್ಟಲಿಕ್ಕೆ ಅವರಿಗೆ ಸುಸಾಧ್ಯವಾಯ್ತು. ಗುಂಪುಗೂಡಿ ಬೇರೆ ಕಡೆಗೆ ಹೋದರೆ—"ಊಟದಲ್ಲಿ ಒಂದೇ ಸಾಲು, ಮಲಗಲು ಒಂದೇ ಹಾಸಿಗೆ, ಬೇರೆ ತೆರವಿದ್ದರೂ ಇಳಿಯಲು ಒಂದೇ ಕೋಣೆ. ಕವಿತಾವಾಚನದಲ್ಲಿ ಒಂದೇ ಧಾಟಿ; ಬರಹಗಳಲ್ಲಿ ಒಂದೇ ಶೈಲಿ." ಆದರೆ ಕಡಿವಾಣ ಕೈಯಲ್ಲಿ ಹಿಡಿದು ಗುಂಪನ್ನು ನಡೆಯಿಸಬಲ್ಲ ದಿಟ್ಟತನ ಅವರದಲ್ಲವಾದುದರಿಂದಲೇ ಗುಂಪು ಮೂಲೆಗುಂಪಾಯಿತೆಂದು ಹೇಳುವವರುಂಟು.

## ಕವಿತೆಯ ಹೊಸಹೊನಲು

ಮೂವತ್ತು ವರುಷಗಳ ಹಿಂದೆ ಧಾರವಾಡದ ಶಾಲ್ಮಲೆಯ ಉಗಮದ ಬಳಿಯಲ್ಲಿ, ಕವಿತೆಯ ಹೊಸಹೊನಲೊಂದು ಪ್ರವಹಿಸತೊಡಗಿತು. ಆ ಹೊನಲಿನಲ್ಲಿ ಮಿಂದ ಅದೆಷ್ಟೋ ಎಳೆಯರಿಗೆ ಕವಿಯುಕಣ್ಣು ಬಂದಿದೆ; ಅದರಲ್ಲಿ ನಲಿದವರು ಕನ್ನಡ ಕಟ್ಟುವುದಕ್ಕೆ ಬದ್ಧಕಂಕಣರಾಗಿದ್ದಾರೆ; ಆ ಹೊನಲಿನ ನೀರು ಕುಡಿದು ಕನ್ನಡಿಗರು ಕುಣಿಯಲಿದ್ದಿದ್ದಾರೆ. ಇದೇನು ಸಣ್ಣ ಮಾತೇ? ಅದರಿಂದ ಮೂರು ಏಕೀಕರಣಗಳಿಗೂ ಬಣ್ಣ ಬಂದಿದೆ; ಬಲಬಂದಿದೆ; ಕಾಲಬಂದಿದೆ. "ಹಕ್ಕಿಹಾರುತಿದೆ ನೋಡಿರಿ" ಎಂದು ಆ ಕವಿತೆಯ ಹೊನಲಿಗೆ ಕರ್ನಾಟಕ ಸಾರಸ್ವತರು ಅಖಿಲ ಕರ್ನಾಟಕದ ಮುದ್ರೆಯೊತ್ತಿದರು. ಮುದ್ರಿತ ನಾಣ್ಯವು ಚಲಾವಣೆಯಲ್ಲಿ ಬರುವಂತೆ ಅವರ ಕವಿತೆಯೂ ಭರದಿಂದ ಕನ್ನಡವನ್ನೆಲ್ಲ ವ್ಯಾಪಿಸಿತು; ಕರ್ನಾಟಕವೆಲ್ಲ ಹಬ್ಬಿತು; ಕನ್ನಡಿಗರನ್ನೆಲ್ಲ ಪವಣಿ

ಸಿತು. ಬೇಂದ್ರೆಯವರ ಕವನಗಳೆಲ್ಲ ಕನ್ನಡಿಗರ ಕವನಗಳಾದವು; ಕವಿ ಕನ್ನಡಿಗರ ಅಕ್ಕರೆಯವನಾದನು. ಆ ಕವಿತೆಯಲ್ಲಿ ಏನಿದೆ ಆ ತಂತ್ರ? ಮಂತ್ರ ಮಾಟವಿದೆಯೇ ?

ಕಾವ್ಯಲಕ್ಷಣಗಳು ಅವೆಷ್ಟೋ ಉಂಟು. ಆದರೆ ಅವೆಲ್ಲವೂ ಭಾವದ ಸೊಗಸು, ಮಾತಿನ ಸೊಗಸು, ರೀತಿಯ ಸೊಗಸು ಈ ಮೂರರಲ್ಲಿ ಅಡ ಕವಾಗುತ್ತವೆಂದೂ ಈ ಮೂರು ಬಗೆಯ ಸೊಗಸೂ ಒಂದುಗೂಡಿ ಮೊತ್ತ ವಾಗಿ ಕಾಣುವುದು ಕಾವ್ಯದ ಜೀವಗುಣ ಇರುವಲ್ಲಿ ಮಾತ್ರವೆಂದೂ ಶ್ರೀ. ಮಾಸ್ತಿ ಅವರ ಅಭಿಪ್ರಾಯ."ಆಡುವ ಮಾತನ್ನೆಲ್ಲ ಕಾವ್ಯಮಾಡುವ ಮನೋಧರ್ಮ ಶ್ರೀ. ಬೇಂದ್ರೆ ಅವರಲ್ಲಿದೆ. " ಬೆಳಗಾಂವಿಯ ಸಾಹಿತ್ಯ ಸಮ್ಮೇಲನ (೧೯೨೯)ದಲ್ಲಿ "ಹಕ್ಕಿ ಹಾರುತಿದೆ" ಕವನವನ್ನು ಕವಿಯ ಬಾಯಿಂದಲೇ ಕೇಳಿದ, ಕಾವ್ಯ ಪ್ರಪಂಚದಲ್ಲಿ ಬಳಕೆಯುಳ್ಳವರು "ಈ ಕವಿಯ ಶಕ್ತಿ ಇವನದೇ ಆದ ಹೊಸ ಒಂದು ಶಕ್ತಿ"ಯೆಂದು ಮನ ಗಂಡರು. ಅವರ ಕಾವ್ಯಲತೆ ಇನ್ನೂ ಬೆಳೆಯುತ್ತಿದೆ. ಈಗಾಗಲೇ ಅವರ ಆರೆಂಟು ಕವನ ಸಂಗ್ರಹಗಳು ಕನ್ನಡಿಗರ ಕಣ್ಣೆದಿರಿಗೆ ಬಂದಿವೆ; ಅವರ ಕವನಗಳೆಷ್ಟೋ ಕನ್ನಡಿಗರಿಗೆ ದಿನಬಳಕೆಯ ಕವಿತೆಗಳಾಗಿವೆ. ಕನ್ನಡ ಕಾವ್ಯಸಮುದಾಯಕ್ಕೆ ಇವರು ಅನೇಕ ಅತ್ಯುತ್ತಮ ಕವಿತೆಗಳನ್ನು ಸೇರಿ ಸಿದ್ದಾರೆಂದರೆ ದೊಡ್ಡ ಮಾತಲ್ಲ; "ಇವರು ಪ್ರಪಂಚದ ಕಾವ್ಯ ಸಂಪ ತ್ತನ್ನೇ ಬೆಳೆಸಿದ್ದಾರೆಂ"ದು ಬಲ್ಲವರ ಮತವಿದೆ. ಇವರ ಕವಿತೆಯ ವಿಷ ಯವು ಬಹು ಜನರು ಕಂಡದ್ದಾದರೂ, ಅದರ ವಿವರವು ಕವಿಯ ಮನ ಸ್ಸಿಗೆ ಮಾತ್ರ ಕಂಡದ್ದು. "ಅದನ್ನು ಹೇಳುವ ರೀತಿ ಇವರಲ್ಲಲ್ಲದೆ ಇನ್ನೆ ಲ್ಲಿಯೂ ಇರಲಾರದೆಂಬಷ್ಟು ವೈಯಕ್ತಿಕವಾಗಿದೆ. ಕವಿತೆ ಉತ್ತಮ ವಾಗಬೇಕಾದರೆ ಅದು ಬಾಳ ಆಳದಿಂದ ಬರಬೇಕು." ಬೇಂದ್ರೆ ಅವರು ಸೃಷ್ಟಿಯ ವ್ಯಾಪಾರಗಳನ್ನು ಕಣ್ತೆರೆದು, ಮನತೆರೆದು ನೋಡುವಂತೆ, ಜನದ ಬಾಳುವೆಯಲ್ಲಿ ಪ್ರೇಮಹರಿಯುವ ರೀತಿಯನ್ನೂ ಕಣ್ತೆರೆದು ಮನ ತೆರೆದು ನೋಡಬಲ್ಲವರು. ತೀವ್ರವಾದ ರಸಾನುಭವಕ್ಕೂ, ವಿಚಾರ ಶಕ್ತಿಗೂ ಒಗೆತನ ಇರುತ್ತಿರುವದಿಲ್ಲವಂತೆ. ಆದರೆ ಅವೆರಡೂ ಬೇಂದ್ರೆ ಯವರಲ್ಲಿ ಪಾರ್ವತಿಪರಮೇಶ್ವರರಂತೆ ಮಿಲನ ಹೊಂದಿವೆಯೆಂದೂ,

ಕೃತಿಯಲ್ಲಿ ರಾಗದ ಭಾಗವೂ ಬುದ್ಧಿಯ ಭಾಗವೂ ಸಮಸಮನಾಗಿ ನಡೆಯುತ್ತವೆಂದೂ ವಿಮರ್ಶಕರು ಹೊಗಳಿದ್ದಾರೆ. ಅವರು ಜನದ ಬಾಳುವೆಯಲ್ಲಿ ಸೇರಿ ಬೆಳೆದಿರುವದರಿಂದಲೂ, ಜನದ ಬಾಳನ್ನು ಚೆನ್ನಾಗಿ ನೋಡಿರುವರಿಂದಲೂ, ಜನಪದಸಾಹಿತ್ಯಕ್ಕೆ ಮನಸ್ಸನ್ನು ತೆತ್ತಿರುವದರಿಂದಲೂ ಅವರ ಕೃತಿಗಳು ಅಂಥ ಗುಣಗಳನ್ನು ಪಡೆದಿವೆ. "ಜನದ ಬಾಳಿನಿಂದ ಜನದ ನಡೆಯಿಂದ, ಜನದ ನುಡಿಯಿಂದ ಪ್ರಚೋದಿತವಾಗುವ ಕಾವ್ಯವು ಪಾಂಡಿತ್ಯದ ಕಾವ್ಯಕ್ಕಿಂತ ನೂರು ಮಡಿ ಹೆಚ್ಚು ಜೀವಂತವಾಗಿರುತ್ತದೆ." ಇವರ ಕವಿತೆಯಲ್ಲಿ ಭಾವಕ್ಕೆ ಮಾತಿಗೆ ಅರ್ಥವೂ ಸಿದ್ಧಿಯೂ ಬಂದಿವೆಯೆಂದು ಒಬ್ಬರು ಬಣ್ಣಿಸಿದರೆ, ಇವರ ಕವಿತೆಯ ತಳವಲ್ಲೆಲ್ಲ ಆಳವಾದ ವಿಚಾರವಿದೆ; ಅಧ್ಯಾತ್ಮದೃಷ್ಟಿಯಿದೆ; ಕೆಲವು ಕವನಗಳಲ್ಲಂತೂ ವಿಶ್ವದರ್ಶನದ ರೇಖೆಗಳು ಸ್ಪಷ್ಟವಾಗಿ ಮೂಡಿವೆಯೆಂದು ಇನ್ನೊಬ್ಬರು ವರ್ಣಿಸುವರು. "ಅವರ ಕವಿತೆ ಒಂದು ಚಿಲುಮೆ. ನೋಡಲಿಕ್ಕೆ ಚಿಕ್ಕದು. ತೋಡಿದಷ್ಟು ಅರ್ಥ ಉಕ್ಕುತ್ತಲೇ ಇರುತ್ತದೆ. ತೋಡುವ ಶ್ರಮ ಮಾತ್ರ ಒಂದೊಂದು ಸಲ ಸ್ವಲ್ಪ ಹೆಚ್ಚಾಗಬಹುದೆಂ"ದು ಒತ್ತಟ್ಟಿನ ಉಲುಹಾದರೆ, "ಅವರ ಕವನಗಳು ಕಠಿನ. ನಾರಿಕೇಳಪಾಕ" ಎಂದು ಇನ್ನೊತ್ತಟ್ಟಿನ ಗಜಬಜಿ. "ಉದ್ದಾಮಪಂಡಿತರಿಗೆ ತಕ್ಕ ಸಾಮಗ್ರಿ ಇವರ ಕವಿತೆಗಳಲ್ಲಿದೆ. ಅಷ್ಟೇ ಅಲ್ಲ. ಕನ್ನಡ ಭಾಷೆ ಮಾತ್ರ ಬರುವವರಿಗೂ ಇವರ ಕವಿತೆ ಅರ್ಥವಾಗುತ್ತದೆ. ಪೂರ್ಣ ಅರ್ಥವಾಗಲಿ, ಆಗದಿರಲಿ. ಭಾವಸಿಗಲಿ, ಸಿಗದಿರಲಿ ಇವರ ಕವಿತೆ ಕೇಳಿ ಮುಗ್ಧರಾಗದವರು ಇಲ್ಲ. ಓದುವ ಧಾಟಿ, ಪದಬಂಧ, ನುಡಿಯ ಅಂದ, ಉಕ್ತಿ ವೈಖರಿ, ಪ್ರಾಸದ ಸೊಬಗು ಕೇಳುವವರಿಗೆ ಎದೆದುಂಬಿ ಬರುತ್ತದೆ. ಅದೊಂದು ಸಮ್ಮೋಹನ ಮಂತ್ರ" ಎಂಬ ಬಾಯಿತುಂಬ ಬರುವ ಅಗ್ಗಳಿಕೆಯ ನುಡಿಗಳನ್ನು ಒಮ್ಮೆ ಕೇಳುವೆವು; ಇಂಥ ಕಾವ್ಯದ ಪರಿಚಯಕ್ಕಾಗಿಯೇ ಬೇರೆಬೇರೆ ದೇಶದ ಜನರು ಆಶೆಪಡುವರೆಂದೂ, ಕವಿ ತಾನು ಧನ್ಯನಾಗಿ, ನಾಡನ್ನು ಧನ್ಯವಾಗಿಸುವನಲ್ಲದೆ ಭಾಷೆ ಇದರಿಂದ ಒಂದು ಹಿರಿಮೆಯನ್ನು ಪಡೆಯುತ್ತದೆಂದೂ ಇನ್ನೊಮ್ಮೆ ಆಲಿಸುವೆವು. ಬರಬರುತ್ತ ಇವರ ಕವನಗಳ ನುಡಿಯಲ್ಲಿ ನಡಿಗೆ ಒಳ್ಳೆಯ

ಹದಕ್ಕೆ ಬಂದಿದೆಯೆಂದೂ, ಕಾವ್ಯದ ಜೀವಾಳಧ್ವನಿ ಕೋರಿದ ಸ್ವರವನ್ನು ಥಟ್ಟನೆ ನುಡಿಸುತ್ತದೆಯೆಂದೂ, ಶಬ್ದಗಳು ಇನ್ನಾರ ಕವಿತೆಯಲ್ಲೂ ಅಷ್ಟು ಸಾಧಿಸಿಲ್ಲವೆಂದೂ ಇನ್ನೊಮ್ಮೆ ಕೇಳುವೆವು. "ಅವರ ಕಾವ್ಯ ಶಕ್ತಿಗಿಂತ ಅವರಲ್ಲಿರುವ ಇನ್ನೊಂದು ಶಕ್ತಿ ದೊಡ್ಡದಿದೆ; ಅದು ಯಾವು ದೆಂದರೆ—ನಗದವರನ್ನು ನಗಿಸುವುದು; ಹಾಗೂ ಬರೆಯದವರನ್ನು ಬರೆ ಯಿಸುವುದು ಕವಿತೆಗಳ ಉತ್ಪಾದಕರು ನೂರಾರು ಮಂದಿ ಸಿಗಬಹುದು; ಕವಿಗಳ ಉತ್ಪಾದಕರು ಸಾವಿರದಲ್ಲಿ ಒಬ್ಬರು ಕೂಡ ಸಿಗದೆ ಇರಬ ಹುದು. 'ಕಸಬರಿಗೆ'ಯಲ್ಲಿ ಸಹ ಸುಪ್ತಬುದ್ಧನನ್ನು ಜಾಗ್ರತಗೊಳಿಸುವ ಬೇಂದ್ರೆ ಅವರು ಅಪ್ರಬುದ್ಧ ತರುಣರ ಸುಪ್ತಶಕ್ತಿಗಳನ್ನು ಬಡಿದೆಬ್ಬಿ ಸಲು ಎಡೆಬಿಡದೆ ಪ್ರಯತ್ನಿಸುವದನ್ನು ಎಲ್ಲರೂ ಬಲ್ಲರು." ಇವರು ಕವಿತೆಗಳನ್ನು ಬರೆದಷ್ಟೆಲ್ಲವೂ ಮುದ್ರಿತವಾಗಿಲ್ಲ; ತಲೆಯಲ್ಲಿದ್ದವುಗಳ ನ್ನೆಲ್ಲ ಬರೆದೂ ಇಟ್ಟಿಲ್ಲ. ಹೀಗಿದ್ದರೂ ಅವರ ಕಾವ್ಯಪ್ರಪಂಚವು ಕನ್ನ ಡಿಗರಿಗೆ ಅಪಾರವಾದ ಆನಂದವನ್ನು ಕೊಡುವಷ್ಟು ವಿಪುಲವಾಗಿದೆ.

## ಕನ್ನಡ ಅಂಬಿಕೆಯ ತನಯ

ಇಷ್ಟು ವಿಪುಲ ಕವಿತೆಗಳನ್ನು ರಚಿಸಿದರೂ, ಇಷ್ಟು ಶ್ರೇಷ್ಠ ಕೃತಿ ಗಳನ್ನು ಕನ್ನಡಕ್ಕೆ ಸಲ್ಲಿಸಿದರೂ, ಇಂಥ ವಿಶಾಲೋನ್ನತ ಆನಂದದಾಯಿ ಶಕ್ತಿಯನ್ನು ಹರಹಿದರೂ ಅವರು ಆ ಕವಿತೆಗಳು ತಮ್ಮವಲ್ಲ, ಅವು ಕನ್ನಡಮ್ಮನವೆಂದು ವಿನಯಿಸಿದ್ದಾರೆ. "ಕನ್ನಡದ ಅಶರೀರವಾಣಿಯು ಸಾವಿರ ಬಾಯಿಗಳಿಂದ ತನ್ನ ಕಣಸನ್ನು ಕನ್ನಡಿಸುತ್ತಿದೆ. ಆ ಸಾವಿರ ಬಾಯಿಗಳಲ್ಲಿ ನನ್ನದೊಂದು. ಅದೇ ನನ್ನ ಧನ್ಯತೆ"ಯೆಂದು ಹರುಷ ಪುಲಕಿತರಾಗಿದ್ದಾರೆ. 'ಅಂಬಿಕಾತನಯದತ್ತ' ಎಂಬ ಕಾವ್ಯನಾಮವು ಅವರ ತಾಯಭಕ್ತಿಯ ಕುರುಹಾಗಿದ್ದರೂ, ಆ ಹೆಸರು ಕವಿತೆಯ ಕೆಳಗೆ ಬಂದಾಗ— ಅವರು ಕನ್ನಡ ಅಂಬಿಕೆಯ ತನಯರೆಂದೇ ಅನಿಸಿದರೆ ಆಶ್ಚರ್ಯವೇನು? ಅವರು ಒಬ್ಬ ಕವಿಯಂತೆ ಬರಿಯ ಕವನಗಳನ್ನು ರಚಿಸಿ ತಣ್ಣಗೆ ಕುಳಿತಿಲ್ಲ. ಅವರ ಪ್ರಕೃತಿಯಲ್ಲಿ ಎಷ್ಟೋ ಲೋಪ ದೋಷಗಳಿರಬಹುದು; ಆ ಮಾತು ಅವರಿಗೂ ತಿಳಿಯದೆ ಇಲ್ಲ. ಅವರಲ್ಲಿ

"ಜೀವನದ ಎಲ್ಲ ಶಕ್ತಿಗಳನ್ನು ಆಮೂಲಾಗ್ರವಾಗಿ ಅರಿತು ಇತಿಮಿತಿ ಯಿಲ್ಲದೆ ಎಲ್ಲ ಬಗೆಯ ಸಿದ್ಧಿಗಾಗಿ ಹಾತೊರೆಯುವ ಒಂದು ಹಿರಿಯಾಸೆ" ಮನೋಧರ್ಮವಿರುವದರಿಂದ "ವರಕವಿಯಂತೆ ಎಲ್ಲವನ್ನೂ ಇಡಿಯಾಗಿ ನೋಡಬಲ್ಲರು; ವರವಿಮರ್ಶಕನಂತೆ ಬಿಡಿ ಬಿಡಿಯಾಗಿ ಎಲ್ಲವನ್ನೂ ಬಿಡಿಬಿಡಿಸಿ ತೋರಿಸಬಲ್ಲರು. ಅವರ ಬುದ್ಧಿಯು ಬೀಜರಾಶಿಯಿದ್ದಂತೆ. ಯೋಗ್ಯ ಕ್ಷೇತ್ರ ದೊರೆತರೆ ಬೆಳೆದು ಹೆಮ್ಮರವಾಗಿ ಸಾವಿರಾರು ಜನರಿಗೆ ಆನಂದವನ್ನು ಕೊಡುವ ಬೀಜವಿಚಾರಗಳು ಅವರಲ್ಲಿ ಅಗಣಿತವಾಗವೆ. ಅವರು ಸಾಹಿತ್ಯದ ಪುನರುಜ್ಜೀವನಕ್ಕೆ ಗುಂಪುಕಟ್ಟಿ ಹೆಣಗಿದ್ದಾ ರೆಂಬುದೂ, ಜನಪದ ಸಾಹಿತ್ಯವನ್ನು ಉಪಾಸಿಸಿ ಅದರ ಮೋಹಕ" ಸರಳತೆ ಮತ್ತು ಗುಂಗುಹಿಡಿಸುವ ಧಾಟಿಗಳನ್ನು ಬಳಸಿ ಬೆಳಸಿ ಕೊಂಡಿದ್ದಾರೆಂಬುದೂ, ಲಾವಣಿಗಳನ್ನು ಸಂಗ್ರಹಿಸುತ್ತ ಊರೂರು ಸುತ್ತಿದ್ದಾರೆಂಬುದೂ, ಎಲ್ಲ ಜ್ಞಾನ ಭಾಂಡಾರವನ್ನೂ ಸೂರೆಗೊಳ್ಳುವ ಮಹತ್ವಾಕಾಂಕ್ಷೆಯುಳ್ಳವರೆಂಬುದೂ ಕನ್ನಡಿಗರು ಅರಿತ ವಿಷಯವಾಗಿದೆ. "ಕಿರಿಯರೊಡನೆ ಸಮಾನಸ್ಕಂಧರಂತೆ ಮಾತನಾಡಿ, ಅವರ ಲೋಪ ದೋಷಗಳನ್ನು ಮನಸ್ಸಿಗೆ ಚುಚ್ಚದಂತೆ ಬಿಚ್ಚಿತೋರಿಸಿ, ಅವರಲ್ಲಿ ಅವ ರಿಗೂ ತಿಳಿಯದೆ ಹುದುಗಿಕೊಂಡ ಶಕ್ತಿಗಳನ್ನು ಕಂಡುಹಿಡಿದು, ಮುಕ್ತ ಕಂಠದಿಂದ ಹೊಗಳಿ, ಅವರ ಗುರಿಯಿಲ್ಲದ ಜೀವನಕ್ಕೆ ಆದರ್ಶವನ್ನು ಕಲ್ಪಿಸಿಕೊಟ್ಟು, ಕರ್ನಾಟಕದ ಪುನರುಜ್ಜೀವನಕ್ಕೆ ಯಥಾಶಕ್ತಿ ಸಹಾಯ ಮಾಡಲು ಅವರನ್ನು ಹುರಿದುಂಬಿಸುವ ಯುಕ್ತಿ ಇವರಿಗೆ ಸಾಧಿಸಿದೆ.'' ಅಂತೆಯೇ ಅವರು ಕವಿಗಳಿದ್ದಂತೆಯೇ ಕವಿಗಳ ಅಪ್ಪನೂ ಆಗಿದ್ದಾರೆ. ಅವರ ಬಹುಮುಖದ ಕಾಯಕ್ಕೆ ಬೆಳಕು ಬರುವದೆಲ್ಲಿಂದ? ಹಾಡಿದವನ ಕಾಪಾಡಲೆಂದು ಕೈಹತ್ತು ಎತ್ತಿದಾಕೆಯೂ, ಎತ್ತ ಕಿವಿಯ ತಿರುವಿದರು ಅತ್ತ ಐವೊಗದಿ ಮುತ್ತಿದಾಕೆಯೂ, ಬೆಳೆವ ಚಂದ್ರಕಳೆ ಮುಕುಟ ದಾಕೆಯೂ ಆದ ಗಾಯಿತ್ರಿ ತಾಯಿಯಿಂದ, ಅಂತೆಯೇ ಅವರ ಅಂತ ರಾತ್ಮವು, ಅಲ್ಲಮಪ್ರಭು ಮುಟ್ಟಿದ ಆತ್ಮವಿವೇಕದ ಗೌರೀಶಂಕರ ಶಿಖರ ವನ್ನೂ, ಹರಿಶ್ಚಂದ್ರನು ಕಂಡ ಸತ್ಯಹರಸ್ವರೂಪವನ್ನೂ, ಭರತೇಶನ ಭೋಗ-ಯೋಗವನ್ನೂ, ರಾಮಸೀತೆಯರ ದೈವಿಕ ಪ್ರೀತಿಯನ್ನೂ ಗರತಿ

ಯರ ಹಾಡಿನೊಳಗಿನ ಸೌಜನ್ಯ ಸಿದ್ಧಿಯನ್ನೂ ಸಾಹಿತ್ಯದಲ್ಲಿ ಕಾಣಬಯು ಸುತ್ತದೆ; ಅಂಥ ಶಕ್ತಿದಾಯಿಯಾದ ಗಂಗಾಮಾತೆಯನ್ನು— "ನಾಡಿ ನಾಡಿಯನು ತುತ್ತಬಾ; ನಮ್ಮ ನಾಡನ್ನೆ ಸುತ್ತಬಾ; ಸತ್ತ ಜನರನ್ನು ಎತ್ತಬಾ." ಎಂದು ಆಹ್ವಾನಿಸುತ್ತದೆ; "ಸತ್ತಿರುವರೆದೆ ಸೇರು; ಸುತ್ತಿರುವ ವಿಷ ಹೀರು; ಕಿತ್ತು ಭಯ ಬಿಟ್ಟ ಬೇರು" ಎಂದು ಶೂರರ ಕಣಿಯೂ, ಧೀರರರಾಣಿಯೂ ಆದ ತೀರದ ವೀರರಸದ ವಾಣಿಯನ್ನು ಕೇಳಿಕೊಳ್ಳುತ್ತದೆ. ಇಂಥವೆಲ್ಲ ಸಣ್ಣಬಾಯಿಗೆ ದೊಡ್ಡತುತ್ತು ಎನಿಸಿದರೂ ಅವು ಬಡ ಬೇಂದ್ರೆ ಹೇಳುವ ಮಾತಲ್ಲ; ಅಂಬಿಕಾತನಯದತ್ತನಿಗೆ ಕಾಣುವ ಮಾತೆಂದೂ, ಬರಿ ಬೇಂದ್ರೆ ಯಾವ ದೊಡ್ಡ ಮನುಷ್ಯನೆಂದೂ ಅವರೇ ಒಂದು ಕಡೆಗೆ ಹೇಳಿಕೊಂಡಿದ್ದಾರೆ. ಅಂಬಿಕಾತನಯರಾಗಿರುವ ಅವರು— "ನಮ್ಮ ಸಾಹಿತ್ಯವು ಸಹಜೀವನದ ಮಂತ್ರವಾಗಲಿ; ನಮ್ಮ ಏಕೀಕರಣವು ಅದರ ತಂತ್ರವಾಗಲಿ; ನಮ್ಮ ಜನ ಅದರ ಯಂತ್ರವಾಗಲಿ" ಎಂದೂ, "ಸಾಹಿತ್ಯವು ಕಿವಿ ತೆರೆಯಿಸಿ ಶ್ರುತಿಮಂತರನ್ನಾಗಿ ಮಾಡಲಿ; ಕಣ್ತೆರೆಯಿಸಿ ಅನಿಮಿಷ ದೇವತೆಗಳನ್ನಾಗಿ ಮಾಡಲಿ; ಹೃದಯತೆರೆಯಿಸಿ ಪ್ರೇಮವನ್ನು ತುಂಬಲಿ; ಸೂರ್ಯನಂತೆ ಸತತ ಪ್ರಕಾಶಮಾನವಾಗಿ ಮಾಡಲಿ'' ಎಂದು ಹಾರಯಿಸುವುದು ಸ್ವಾಭಾವಿಕವೇ ಅಲ್ಲವೇ? ಸಾಹಿತ್ಯ ಸಮ್ಮೇಲನದಲ್ಲಿ ಸೇರಿದ ಸ್ತ್ರೀಪುರುಷರು ಅವರ ಪಾಲಿಗೆ— "ಸತ್ಯಲೋಕದ ಸಾರಸ್ವತ ಸಭೆಯಲ್ಲಿ ಕುಳಿತು ದೇವತೆಗಳಾಗಿರುವ ಅಕ್ಕತಂಗಿಯ"ರಂತೆಯೂ ಅಣ್ಣತಮ್ಮಂದಿರಂತೆಯೂ ಕಂಡುಬಂದರೆ ಆಶ್ಚರ್ಯವೇನು? ಮಾನವರೆಲ್ಲರೂ ಒಮ್ಮೆ ಕವಿಗಳಾಗಲೇಬೇಕೆಂದೂ, ಅವರು ಮಾತನಾಡುವುದೇ ಕಾವ್ಯವಾಗಬೇಕಾಗಿದೆಯೆಂದೂ ಅವರು ಹೇಳುವುದು ಅತಿಶಯೋಕ್ತಿಯಾಗಬಹುದೇ? "ಸೌಂದರ್ಯವು ರಸಮಯವಾಗಿ, ರಸದಲ್ಲಿ ಪ್ರೀತಿ ಉದಯಿಸಿ, ಅದರಿಂದ ಸ್ಫೂರ್ತಿಯುಂಟಾಗಿ ಅದೇ ಆನಂದದಲ್ಲಿ ಒಮ್ಮೆ ಕೊನೆಗಂಡರೆ, ಇನ್ನೊಮ್ಮೆ ಆನಂದವೇ ಸ್ಫುರಣಗೊಂಡು ಪ್ರೀತಿಯಿಂದ ರಸಮಯವಾದಾಗ ಎಲ್ಲವೂ ಸೌಂದರ್ಯಮಯವಾಗಿ ತೋರುವದು. ಆನಂದಿಯಾಗಿರುವದೇ ಕವಿಯ ಲಕ್ಷಣ." ಅದು ಮಾನವರೆಲ್ಲರಿಗೂ ಹೇಗೆ ಸಾಧ್ಯ? ಮಾನವನಾದವನಿಗೆ ಸೃಷ್ಟಿ

ಯೊಳಗೆ ಸುಂದರವಾಗಿ ಕಾಣಿಸುವ ವಸ್ತುವೊಂದು ಇರಲೇಬೇಕಷ್ಟೇ? ಆ ಸೌಂದರ್ಯವನ್ನು ಅವನು ಗುರುತಿಸುವನಾದ್ದರಿಂದ ಅವನು ರಸಿಕನು; ಅದನ್ನು ಆಡಿತೋರಿಸಲು ಅವನಿಗೆ ಬಾಯಿಯಿಲ್ಲ; ಆದ್ದರಿಂದ ಅವನು ಮೂಕ ಕವಿ; ಅದರಿಂದ ಸಂತೋಷವುಂಟಾಗತೊಡಗಿದರೆ ಅವನು ಸಾಹಿತ್ಯ ಕವಿ; ಇನ್ನು ಮುಂದೆ ಜೀವನವನ್ನೇ ಕಾವ್ಯವನ್ನಾಗಿ ಮಾಡಿದ ಭಕ್ತ, ತನ್ನಂತೆ ಎಲ್ಲರನ್ನು ಅವರವರ ಹಾದಿಗೆ ಹಚ್ಚುವ ಮಂತ್ರಸಾಮರ್ಥ್ಯವುಳ್ಳ ಋಷಿ; ತಾವು ಉಸಿರಿದ್ದೇ ವೇದ, ಕುಸುರಿಸಿದ್ದೇ ಕಲೆಯೆಂದೆನಿಸಬಲ್ಲ ಲೀಲಾವತಾರಿ, ಇವರೆಲ್ಲರೂ ಕವಿಗಳಲ್ಲದೆ ಏನು? ತನ್ನಂತೆ ಪರರಕಾಣುವ ದೃಷ್ಟಿಯುಳ್ಳವನಿಗೇ ಈ ದೃಷ್ಟಿಕಾಣುವದು. ಅದು ಬೇಂದ್ರೆ ಅವರಲ್ಲಿದೆ. ಅಂತೆಯೇ ಅವರು "**ಅಂಬಿಕಾತನಯ**"ರು.

---

# ಸೃಷ್ಟಿಮಾತೆಯೊಡನೆ

## ಕವಿಬ್ರಹ್ಮನ ಚತುರ್ಮುಖ

ಬ್ರಹ್ಮನು ಸೃಷ್ಟಿಕರ್ತನಾಗಿರುವಂತೆ ಕವಿಯೂ ಸೃಷ್ಟಿಕರ್ತನು. ಕವಿಯು ಶಬ್ದಗಳಿಂದ ಸೃಷ್ಟಿಯನ್ನು ರಚಿಸುವನು. ಆದರೆ ಕವಿಯು ಉಸುರುವದೆಲ್ಲವನ್ನು ಕಾಣುವುದು ಹೇಗೆ? ಸಾಮಾನ್ಯರಿಗೆ ರಾಗದ್ವೇಷಾತ್ಮಕ ದ್ವಿನೇತ್ರಗಳಿರುವವು; ಅವುಗಳಿಂದಲೇ ಅವರು ಸೃಷ್ಟಿಯನ್ನು ನೋಡುತ್ತಾರೆ. ಆದರೆ ಕವಿಯು ಮಾತ್ರ ಬೇರೊಂದು ನೇತ್ರದಿಂದ ನೋಡುವನು; ಅದುವೇ ತೃತೀಯ ನೇತ್ರ. ಅದರಿಂದ ತಾನು ನೋಡುವನಲ್ಲದೆ, ನೋಡಲಿಕ್ಕೂ ಕಲಿಸುವನು. ಜಗತ್ತು ಹಿಂದೆ ರಾಗಮಯವಾಗಿಯೂ, ಇಂದು ದ್ವೇಷಮಯವಾಗಿಯೂ ಕಂಡಿತಂತೆ. ಮುಂದೆ ಜಗವು ಆನಂದಮಯವಾಗಬೇಕೆಂದು ಕವಿಯು ಹವಣಿಕೆ. ಆ ಆನಂದವು ರಸಾಸ್ವಾದದಿಂದ ಉಂಟಾಗುವದು; ಆ ರಸವು ಪ್ರೇಮದೃಷ್ಟಿಯಿಂದಲೂ, ರಮಣೀಯತೆಯ ದರ್ಶನದಿಂದಲೂ ಪ್ರವಹಿಸುವವು. ಕಾವ್ಯಬ್ರಹ್ಮನಾದ ಕವಿಗೆ ಆನಂದ, ರಸ, ಪ್ರೇಮ, ರಮಣೀಯತೆ ಇವು ನಾಲ್ಕು ಮುಖಗಳೇ ಸರಿ. ಆದರೆ ಆ ಆನಂದವೆಲ್ಲಿಯದು? ಆನಂದವನ್ನು ಸವಿಯುವ ಶಕ್ತಿ ಅಂತರಾತ್ಮನಲ್ಲಿದೆಯೆಂದರೆ, ಆನಂದವು ಅಂತರಾತ್ಮನದು ಎಂದಂತಾಯ್ತು. ಆದಕಾರಣ "ಆನಂದವು ಸೃಷ್ಟಿಗೆ ಮೂಲ". ಅದರಂತೆ ಕಾವ್ಯಸೃಷ್ಟಿಗೂ ಆನಂದವೇ ಮೂಲ. ಆನಂದವು ಅಮೃತವಿದ್ದ ಹಾಗೆ. ಅಮೃತ ಪಡೆಯುವದಕ್ಕೆ ಮರ್ತ್ಯಮಾನವನ ಹೃದಯಕ್ಕಿಂತ ಬೇರೆ ಯಾವ ಕಡೆಗೂ ಹೋಗಬೇಕಾಗಿಲ್ಲವಂತೆ. ಹೃದಯ ತೆರೆದಷ್ಟು ಸೌಂದರ್ಯ ಕಾಣಿಸುತ್ತದೆ. ಅಮೃತ ಬಾಯಿಗೆ ಬರುತ್ತದೆ. ಹೃದಯತೆರೆಯುವ ಹಾದಿ ತೋರಿಸುವುದು ಪ್ರೇಮಭಾವಯೋಗ. ಆ ಯೋಗದಿಂದ ಕವಿಗಳು ರಮಣೀಯಗಳಾದ ದಿವ್ಯ ವಿಭೂತಿಗಳ ಕುರುಹುಗಳ ಮುಖಾಂತರವಾಗಿ, ಜೀವಿಗಳಿಗೆ ಪುರುಷೋತ್ತಮನ ಲೀಲಾಮೃತವನ್ನುಣುಸಿ ಪರಮಾನಂದವನ್ನುಂಟುಮಾಡುತ್ತಾರೆ. ಆ ವಿಭೂತಿಯ ದರ್ಶನದಿಂದ **ವಿಸ್ಮಯ**

ವುಂಟಾಗುತ್ತದೆ; ವಿಭೂತಿಯ ಆದರ್ಶದಿಂದ **ಜುಗುಪ್ಸೆ**ವುಂಟಾಗುತ್ತದೆ; ವಿಭೂತಿಯ ಕರಾಳದರ್ಶನದಿಂದ **ಭಯ**ವುಂಟಾಗುತ್ತದೆ; ವಿಭೂತಿಯ ವಿಚಿತ್ರ ದರ್ಶನದಿಂದ **ಹಾಸ**ವೂ, ವಿಭೂತಿಯ ಸಾಕ್ಷೇಪದರ್ಶನದಿಂದ **ರತಿ**ಯೂ ಉಂಟಾಗುವವಲ್ಲದೆ, ವಿಭೂತಿಯ ವೈರೋಧಿಕ ದರ್ಶನದಿಂದ **ಕ್ರೋಧ**ವೂ, ವಿಭೂತಿಯ ಅನುಕೂಲದರ್ಶನದಿಂದ **ಉತ್ಸಾಹ**ವೂ ಉಂಟಾಗುತ್ತವೆ; ಮತ್ತು ವಿಭೂತಿಯ ಸ್ವಸ್ಥ ದರ್ಶನದಿಂದ **ಶಾಂತಿ**ಯೂ, ವಿಭೂತಿಯ ವಿರಹದರ್ಶನದಿಂದ **ಶೋಕ**ವೂ ಉಂಟಾಗುವವು. ಆ ಆ ಪ್ರಸಂಗಗಳಲ್ಲಿ ಉಂಟಾಗುವ ಮನೋಭಾವನೆಗಳೇ ನವರಸಕ್ಕೆ ಬೀಜಗಳು. ಇಂಥ ದರ್ಶನವನ್ನು ಕಂಡಾಗ ಸೌಂದರ್ಯವೆನಿಸುವದು; ಕೇಳಿದಾಗ ಸತ್ಯವೆನಿಸುವದು. ಆದ್ದರಿಂದ ಸೌಂದರ್ಯವೇ ಸತ್ಯ, ಸತ್ಯವೇ ಸೌಂದರ್ಯ. ಕಂಡದ್ದು ಸೌಂದರ್ಯವೂ, ಕೇಳಿದ್ದು ಸತ್ಯವೂ ಆಗಬೇಕಾದರೆ ಆತ್ಮವು ಕಣ್ಣು ತೆರೆಯಬೇಕು; ಅದು ಕಣ್ಣು ತೆರೆದರೆ ಮನದ ಕಣ್ಣು ತಿಳಿಯಾಗಿ, ಮೈಯಕಣ್ಣು ತಿದ್ದಿಕೊಳ್ಳುವದು. ಈ ಮೂರು ಕಣ್ಣು ಪಡೆದರೆ ಮೂರೂ ಲೋಕ ಪಡೆದಂತೆ. ಶ್ರೀ. ಬೇಂದ್ರೆಯವರು ಕಾವ್ಯದ ಉದ್ದೇಶವನ್ನು ಹೇಳಿದುದನ್ನೇ ಇಲ್ಲಿ ವಿವರಿಸಬೇಕು. ಕಾವ್ಯ ಬ್ರಹ್ಮನ ಚತುರ್ಮುಖಗಳಲ್ಲಿ ಆನಂದವು ದೇವ; ಆನಂದಕ್ಕೆ ಕಾರಣವಾದ ರಸವು ಜೀವ; ರಸಕ್ಕೆ ಪ್ರೇಮವು ಭಾವ; ರಮಣೀಯತೆಯು ಜಗ. ಜಗತ್ತು ರಮಣೀಯವಾಗಿ ತೋರಿ, ಪ್ರೇಮಭಾವವು ತಲೆದೋರಲು ಅಲ್ಲಿ ಭಕ್ತಿರಸವು ಹುಟ್ಟುತ್ತದೆ; ಭಕ್ತಿಯುಳ್ಳ ಜೀವವು ಆನಂದವನ್ನು ಅನುಭವಿಸುತ್ತದೆ. ಆನಂದಗಳಲ್ಲಿ ಐದು ಪ್ರಕಾರಗಳೆಂದು ಶ್ರೀ ವಿದ್ಯಾರಣ್ಯರು ವಿಭಾಗಿಸಿದ್ದಾರೆ. ಎಲ್ಲಕ್ಕೂ ಕೆಳಗೆ ವಿಷಯಾನಂದ; ಅದರ ಮೇಲೆ ವಿದ್ಯಾನಂದ; ಆಮೇಲೆ ಅದ್ವೈತಾನಂದ; ಬಳಿಕ ಆತ್ಮಾನಂದ; ಎಲ್ಲಕ್ಕೂ ಮೇಲೆ ಯೋಗಾನಂದ. ಎಲ್ಲಕ್ಕೂ ಮೇಲಾದ ಯೋಗಾನಂದವನ್ನೇ— ಆನಂದದಾಯಿಯಾದ ಕಾವ್ಯವು ತಂದುಕೊಡಬೇಕಷ್ಟೇ ! ಇರಲಿ. ಕಾವ್ಯಬ್ರಹ್ಮನ ನಾಲ್ಕು ಮುಖಗಳಾದ **ಜಗ**ಕ್ಕೆ ಹೊರಗಣ್ಣು, **ಭಾವ**ಕ್ಕೆ ಒಳಗಣ್ಣು **ಜೀವ**ಕ್ಕೆ ಹೊಳೆಗಣ್ಣು; **ದೇವ**ಕ್ಕೆ ತಿಳಿಗಣ್ಣು ಇರುವಂತೆ ತೋರುತ್ತದೆ. ಈ ಜಗತ್ತು ದೇವನ ಪ್ರೇಮ ಪತ್ರವಂತೆ. ಆ

ಪ್ರೇಮಪತ್ರವನ್ನು ಹೆರವರದೆಂದು ನೋಡದಿರಬಾರದು; ತಿಳಿಯದೆಂದು ಕಣ್ಣುಮುಚ್ಚಬಾರದು; ನಮಗೇತಕ್ಕೆಂದು ಅಲಕ್ಷ್ಯಮಾಡಬಾರದು; ನೋಡುತ್ತ ಹೋಗಬೇಕು. ದರ್ಶನದಿಂದ ಅದರ ಪರಿಚಯವುಂಟಾಗುತ್ತದೆಂದೂ, ಪರಿಚಯದಿಂದ ಸಂಭಾಷಣವೂ, ಭಾಷಣದಿಂದ ಸಹವಾಸವೂ, ಸಹವಾಸದಿಂದ ಸಖ್ಯವೂ ಉಂಟಾಗುತ್ತವೆಂದು ಶಾಂತಕವಿಗಳ ಮಾತಿನಲ್ಲಿ ಹೇಳಬಹುದು. ಆ ಸಖ್ಯದಿಂದ ಅರ್ಜುನನು ಶ್ರೀಕೃಷ್ಣನ ವಿರಾಟದರ್ಶನವನ್ನು ಪಡೆಯುವ ಯೋಗ್ಯತೆಯನ್ನು ಪಡೆದನಲ್ಲವೇ? ಜ್ಞಾನಿಗಳಿಗೂ, ವೇದಾಭ್ಯಾಸಿಗಳಿಗೂ ದುರ್ಲಭವಾದ ದರ್ಶನವದು; ಅರ್ಜುನನು ಅಪೇಕ್ಷಿಸದಿದ್ದರೂ ಸಿಕ್ಕ ಭಾಗ್ಯವಾಯಿತು; ಅದರೊಡನೆ ಗುಹ್ಯಕ್ಕಿಂತ ಗುಹ್ಯವಾದ ಜ್ಞಾನವನ್ನೂ ಪಡೆದನಲ್ಲವೇ? ಕವಿ ಕಾವ್ಯಬ್ರಹ್ಮ; ಪ್ರತಿಯೊಬ್ಬನೂ ಇಂದು ಕವಿ-ಶಿಶು; ಶಿಶುವಿಗೂ ನಾಲ್ಕು ಮುಖಗಳುಂಟು; ಆ ನಾಲ್ಕು ಮುಖಗಳಿಗೆ ನಾಲ್ಕು ಕಣ್ಣು ಅವೆ. ಅವುಗಳನ್ನು ತೆರೆದು, ರಹಸ್ಯಮಯವಾದ ಸೃಷ್ಟಿಯನ್ನು ನಿರೀಕ್ಷಿಸಬೇಕು. ಆ ಸೃಷ್ಟಿಯನ್ನು ಆಳವಾಗಿ ಕಂಡು ಸೌಂದರ್ಯವನ್ನೂ, ಶಾಂತವಾಗಿ ಆಲಿಸಿ ಸತ್ಯವನ್ನೂ ತೆಗೆದು ತೋರಿಸುತ್ತಿರುವ ಇಂದಿನ ಕವಿಗಳಲ್ಲಿ 'ಅಂಬಿಕಾತನಯದತ್ತ'ರು ಮುಖ್ಯರು, ಈ ಕಾವ್ಯಬ್ರಹ್ಮನು ಕಂಡ ನಾಲ್ವರಿಯ ಸೌಂದರ್ಯವು ಅಸಂಖ್ಯ ಕವಿತೆಗಳ ರೂಪದಲ್ಲಿ ನಮ್ಮ ಮುಂದೆ ಬಂದಿದೆ.

## ಸೃಷ್ಟಿ-ಕವಿ

ಸೃಷ್ಟಿ ಸೃಷ್ಟಿಯಾಗಿ ಕಂಡರೆ ಕವಿ ಹೇಗೆ? ಜಗತ್ತು ಕಲ್ಲು ಮಣ್ಣಿನದಾಗಿ ಕಂಡರೆ ಅವೇತರ ಕಣ್ಣು? ಮುಗಿಲು ಏನು ಇಲ್ಲದ ಮಾಯೆಯೆಂದೂ, ಚಿಕ್ಕೆ ಎಲ್ಲಿಯೋ ದೂರದ ಮಾಟವೆಂದೂ ಬಗೆದರೆ ಅದೇತರ ಭಾವನೆ? ಸೃಷ್ಟಿಯನ್ನು ಅಲೌಕಿಕವಾಗಿ ಕಂಡವನೇ ಕವಿ; ಅದು ಜೀವಂತವಾಗಿ ತೋರಿದವನೇ ದೃಷ್ಟಾರ; ಋಷಿ. ಋಷಿ ಅಂಶವಿಲ್ಲದ ಕವಿ ಯಾರು? 'ಅಂಬಿಕಾತನಯದತ್ತ'ರು ಹೊರಗಣ್ಣು ಮುಂದೆ ಮಾಡಿ, ಚೆನ್ನಾಗಿ ತೆರೆದು ನೆಲಮುಗಿಲುಗಳನ್ನು ನೋಡಿದ್ದಾರೆ; ಗಿಡಮರಗಳನ್ನು

ಕಂಡಿದ್ದಾರೆ; ಬೆಟ್ಟದರಿಗಳನ್ನು ನಿಟ್ಟಿಸಿದ್ದಾರೆ; ಚಿಕ್ಕೆ ಚಂದ್ರಮರನ್ನು ಈಕ್ಷಿಸಿದ್ದಾರೆ; ಹೂ-ಎಲೆಗಳನ್ನು ದೃಷ್ಟಿಸಿದ್ದಾರೆ. ಅವೆಲ್ಲವೂ ಅವರಿಗೆ ಅಲೌಕಿಕವಾಗಿ ತೋರಿವೆ; 'ಕೋಣನಿಂದಲೂ ಕಲಿಯುವ' ಅವರು ಅವೆಲ್ಲ ಆನಂದಧಾಮವೆಂದು ಬಗೆದಿದ್ದಾರೆ. ಅವರು ಬಣ್ಣಿಸುವ ಸೃಷ್ಟಿ ವಸ್ತುಗಳೆಲ್ಲವೂ ಮಾನವ ಸಾರ್ವಭೌಮನ ಮುಂದೆ ನಿತ್ಯವೂ ನಲಿದು, ನರ್ತಿಸಿ, ಆಡಿ, ಹಾಡಿ ನಗುತ್ತಲಿದ್ದರೂ ಅವೇನೂ ಅವನ ಕಣ್ಣಿಗೆ ಕಾಣದೆ, ಚಿಂತೆಯ ಹುದಿಲಲ್ಲಿ ಸಿಕ್ಕುಬಿದ್ದಿದ್ದಾನೆ; ಜಗದ ಕೋಲಾಹಲ ದಲ್ಲಿ ಕಂಗೆಟ್ಟಿದ್ದಾನೆ; ಮನದ ಮಾಯೆಯಲ್ಲಿ ಕೈಕಾಲು ಕಳಕೊಂಡಿದ್ದಾನೆ. ಸುಖದ ಶೋಧನದಲ್ಲಿ ದಿನದ ಇಪ್ಪತ್ತುನಾಲ್ಕು ಕಳೆಯುವವರಲ್ಲಿ ಸೂರ್ಯೋದಯವನ್ನೇ ಕಂಡರಿಯದ ಸುಖಲೋಲುಪರೂ, ಮುಂಜಾವಿ ನಲ್ಲಿ ಕಣ್ಣು ತೆರೆದಿದ್ದರೂ ಅತ್ತ ಗಮನಿಸದ ಅವಧಾನಿಗಳೂ ಅನೇಕ ರುಂಟು. ಕಾಸುಕೊಟ್ಟು ಚಲನಚಿತ್ರದಲ್ಲಿ ಹಿಡಿತಂದ ಚೆಲುವನ್ನು ಕಾಣಬಯಸುವವರು, ಕಿವಿಗೊಟ್ಟು ಕೇಳಿ, ಕಣ್ತೆರೆದು ನೋಡಿ ಕವಿಯ ಸೌಂದರ್ಯಾನುಭವದ ಸುಖವನ್ನು ಪಡೆಯ ಬಯಸಬೇಡವೇ? 'ಅಂಬಿಕಾತನಯ'ದತ್ತರು ದೇವನ ಪ್ರೇಮಪತ್ರವನ್ನು ಚೆನ್ನಾಗಿ ನೋಡಿ, ಓದಿ, ಕೂಗಿ ಹೇಳುತ್ತಿದ್ದಾರೆ. ಆ ಪತ್ರವು ಯಾವ ನಾಡಿಗೂ ಮೀಸಲಾಗಿದ್ದಲ್ಲ; ಯಾವ ಭಾಷೆಗೂ ಬಳೆದುಕಟ್ಟಿದ್ದಲ್ಲ; ಎಷ್ಟು ದಿನ ಓದಿದರೂ ಮುಗಿಯುವಂಥದಲ್ಲ; ಅದರ ಅರ್ಥ ಒಂದೇ ಬಗೆಯದಲ್ಲ; ಅದರ ಧಾಟಿ, ಅದರ ಓಟಗಳು ಹೃದಯಗಳೆಷ್ಟೋ ಅಷ್ಟು; ಅದಕ್ಕೂ ಹೆಚ್ಚಿಗೆಯೆಂದರೆ ಸರಿ ಆದೀತು.

## ದೃಷ್ಟಿಯಂತೆ ಸೃಷ್ಟಿ

ಸೃಷ್ಟಿಯನ್ನು ನಮ್ಮ ದೃಷ್ಟಿಯಿಂದಲೇ ಕಾಣುವುದು ವಾಸ್ತವಿಕ; ನಮ್ಮ ಕಣ್ಣು "ಕುರುಡಿರಲಿ ಮೆಳ್ಳಿರಲಿ; ಕಪ್ಪು ಕನ್ನಡಕೆ" ಹಾಕಿಕೊಂಡು ನೋಡಬಾರದೆನ್ನುವದು ನಿತ್ಯ-ಸತ್ಯ. ಹಾಗೆ ನೋಡುವ ಕೆಲಸವನ್ನು 'ಅಂಬಿಕಾತನಯದತ್ತ'ರು ಮಾಡಿದ್ದಾರೆ. ಅದು ಎಲ್ಲರಿಗೂ ಸಾಧಿಸದು. "ಹಕ್ಕಿಹಾರುತಿದೆ" ಯೆಂದರೆ "ಚಿಕ್ಕಿಹಾರಿ" ದಂತೆ. ಹಕ್ಕಿ ಹಾರಿದರೆ

ನೋಡಿ ನಲಿಯುವರು; ಜಿಕ್ಕು ಹಾರಿದರೆ ಕಲ್ಲು ಎಸೆಯುವರು. ಹಕ್ಕಿ ನಿರುಪದ್ರವಿ; ಜಿಕ್ಕು ಕಿಡಿಗೇಡಿ. ಹುಲ್ಲು **ಉಳಿದೆಲ್ಲ** ಕಿರಣಗಳನ್ನೂ ನುಂಗಿ, ಹಸರು ಕಿರಣಗಳನ್ನಷ್ಟೇ ನಮ್ಮೆಡೆಗೆ ಬಿಡುವದರಿಂದ ಅದು ಹಸರಾಗಿ ಕಾಣಿಸುತ್ತದೆಂಬುದು ಶಾಸ್ತ್ರೀಯ ಪಾಠದೊಳಗಿನ ಮಾತು. ಹುಲ್ಲು ಹಸರಾಗಿ ಕಂಡಷ್ಟೇ ಆ ದೃಷ್ಟಿ ಹೊಸ ಸೃಷ್ಟಿಯನ್ನು ಕಂಡಂತಾಗಲಿಲ್ಲ. ಅದು ಪಚ್ಚದಂತೆ ಕಾಣಿಸಬೇಕು; ಅದರ ಸ್ಪರ್ಶವು ತಾಯಿಯ ಪ್ರೇಮಸ್ಪರ್ಶವಾಗಿ ತಗುಲಬೇಕು. ಅಂದರೆ ದೃಷ್ಟಿ ಬೇರೆಯಾದಂತೆ. ಸೃಷ್ಟಿಯು ಕಣ್ಣಿಗೆ ಕಾಣುವ ಬಗೆಯ ಮೇಲಿಂದ ಆ ದೃಷ್ಟಿಯ ಮಟ್ಟನ್ನು ನಿರ್ಧರಿಸಬಹುದು. "ಗಿರಿಗಳೇ ಕುಚಗಳು ಧಾರುಣಿಯ" ಎಂದು ಒಬ್ಬರ ಹಾಡು. ಆದರೆ ನಿಜವಾದ ಮೊಲೆಗಳನ್ನು "ಹಿಮವತಿಯ ತುಂಗ ಶಿಖರದ ಮಾದರಿ" ಯೆಂದೂ, ವಿಜಯಯಾತ್ರೆಯಲ್ಲಿ 'ಕಂದನೂಡುವ ಅವಳಿಶಂಖಗಳೆಂ'ದೂ, 'ನಲ್ಲಮ್ಮನ ಗುಡಿಯ ಜೋಡು ಕಳಸಗಳೆಂ'ದೂ, ಬಣ್ಣಿಸಿಬಿಡದೆ, ವೈರಾಗ್ಯದವರ 'ಮಾಂಸದ ಒಟ್ಟಿಲೂ' ಅಲ್ಲ; ನೈತಿಕದವರ 'ಹಾಲಿನ ಬಟ್ಟಲೂ' ಅಲ್ಲವೆಂದು ಸಾರಿ, "ಜಗದಂಬೆಯು ಜೀವ ಶಿಶುವನ್ನು ಮಲಗಿಸಿ ತೂಗುವ ತೊಟ್ಟಿಲ ಕಾಲು" ಎಂದು ನಿರ್ಧರಿಸುವ ದೃಷ್ಟಿಯ ರೀತಿ 'ಅಂಬಿಕಾತನಯದತ್ತ'ರದು.

## ನಶ್ವರತೆಯಲ್ಲಿ ಈಶ್ವರ

ಸುಶಿಕ್ಷಿತರ ಸಂತಾನಸಂಯಮದ ಈ ಯುಗದಲ್ಲಿ "ಮಕ್ಕಳೆಂದರೆ ನೊಣದ ಪಾಯಸ"ವೆಂದೂ "ಕೊರಳಿಗುರುಲೆಂ"ದೂ ಅನ್ನುವವರಿಗೇನು ಕಡಿಮೆಯಿಲ್ಲ. ಅವರ ದೃಷ್ಟಿಯೇ ಬೇರೆ. ಆದರೆ ಹಡೆದ ಕರುಳು— "ನಿನ್ನ ವಿಷವುಂಡು ನೀಲಕಂಠಾಭರಣಗಳಾದೆ"ನೆಂದೂ, "ಸುಖದುಃಖ ಸಮನೆಂಬ ಯೋಗಿಯ ಮಾಡಿದೆ" ಯೆಂದೂ ಹೇಳಿದರೆ ಆ ದೃಷ್ಟಿಯ ಔನ್ನತ್ಯವೇ ಬೇರೆ. ಆಕೆಯ ಕಣ್ಣಿಗೆ ಮಗುವು "ಎಲ್ಲರನು ಗೆಲ್ಲನಿಂತ ಜಗಜಟ್ಟಿ; ಮಲ್ಲಾರಿ ಮಾರ್ತಾಂಡ. ದೇವರದಣ್ಣಾಯಕನಾದ ಗುಡ್ಡದ ಕುಮಾರಸ್ವಾಮಿ. ತನುಜನಾಗಿ ಬಂದ ಅನಂಗ; ರತಿಯಿಲ್ಲದ ಕಾಮಣ್ಣ; ಬಡವರ ಬೆಂಬಲದವನಾದ ಜೋಕುಮಾರ. ಸಿಂಗಾರದ ರಂಗನಾಯಕ;

ಚೆಲುವ ಚೆನ್ನಕೇಶವ; ಮಲಗಿದ ಅನಂತಶಯನ. ಭೂ–ವೈಕುಂಠ ನಿವಾಸಿಯಾದ ವೆಂಕಟರಮಣ, ತಿರೆಗೈ ತಿರುಕ.” ಇಂಥ ತಾಯಿ ಹೃದಯ “ಅಂಬಿಕಾತನಯದತ್ತರದು.’’ ಬೇಂದ್ರೆಯವರ ಜೀವನದಲ್ಲಿ ಮಮತೆ, ಹೆಂಗರುಳು ಕಾಣಬರುವದಿಲ್ಲ; ಕಾರಣವೇನಂದರೆ ಅವರ ವಿಚಾರಪರತೆ, ಗಾಂಭೀರ್ಯ ಹೆಣ್ಣರುಳಿಗೆ ಎಡೆಕೊಡುವದಿಲ್ಲ; ಅಷ್ಟು ಮುಸುಕಿಕೊಂಡಿದೆಯೆಂಬುವ ಮಾತು ಹದಿನಾರಾಣೆ ಸತ್ಯವಾಗಿದೆ. ಮಕ್ಕಳು ನಕ್ಕರೆ ಬೆಳಕಿನ ಬೆಳೆ ಕಾಣುವವರೆಷ್ಟೋ ಜನರುಂಟು; ಆದರೆ ಅತ್ತರೆ ಮುತ್ತಿನ ಮಳೆಯೆನ್ನುವ ಕರುಳಿಗೆ ಏನೆನ್ನಬೇಕು? ಆ ಕರುಳು ಕೂಸಿನ ವಿವಿಧ ಭಂಗಿಗಳನ್ನು ಹತ್ತರಲ್ಲಿ ವಿಭಾಗಿಸಿ ‘ದಶಾವತಾರ’ ವೆನ್ನುವದು. “ನೆಲದ ಮೇಲೆ ಈಸುವ ಮೀನಾವತಾರ! ಬಯಲನ್ನೆಲ್ಲ ಬೆನ್ನಲ್ಲಿ ಹೊತ್ತಿರುವದು ಕೂರ್ಮಾವತಾರ! ಮುಗಿಲನ್ನೇ ಮೊಗದಿಂದೆತ್ತಲು ಹವಣಿಸುವದು ವರಾಹಸ್ವಾಮಿ! ತಾಯ ಬಸಿರನ್ನೇ ಬಗೆದು ಅವಳ ಕರುಳ ಮಾಲೆಯನ್ನು ಧರಿಸುವ ವಿಚಿತ್ರ ನೃಸಿಂಹಸ್ವಾಮಿ! ತಾಯಿಯ ಮೇಲೆ ಕೈಯೆತ್ತಲು ಬಂದ ದಿಟ್ಟ ಪರಶುರಾಮ! ತಾಯ್ತಂದೆಗಳ ಸೆರೆಬಿಡಿಸಿ ಗೀತೆಯ ಹಾಡುವ ಶ್ರೀಕೃಷ್ಣ! ದಿಗಂಬರ ಮೂರ್ತಿ ಬಾಲಬುದ್ಧದೇವ! ಕೋಲಕುದುರೆಯನೇರುವ ಕಲ್ಕಿ”. ಈ ದಶಾವತಾರಗಳನ್ನು ದುರ್ದೆಸೆಯವತಾರವೆಂದು ಎದೆಗೆಡುವವರು ಆ ಮಗುವಿನ ಮುಚ್ಚಿದ ಮುಷ್ಟಿಗೆಯು ಮೂಲೋಕದೊಡೆತನವನ್ನಾಗಲಿ, ಧ್ರುವನ ಚಿಕ್ಕೆಯನ್ನಾಗಲಿ, ಕುಬೇರನ ಸಂಪತ್ತಿಯನ್ನಾಗಲಿ, ನವಶಕ್ತಿಗಳನ್ನಾಗಲಿ ಹೇಗೆ ಕಾಣುವರು? ಭಾಗ್ಯ ತೆರೆದ ಮೇಲೆ ಕೈ ತೆರೆವುದೇನು ತಡ?— “ಎಳನೇಸರಿನ ಹೊಂಬಿಸಿಲ ಕಂದಿಸುವ ಮುಂಜಾವಿನ ಆ ಅರಳದಿದ್ದ ನಗೆಯೂ, ಮಳೆಗಾಲ ಸಂಜೆಯ ಹೂಬಿಸಿಲ ಬಾಡಿಸುವ ಮುಗುಳ ನಗೆಯೂ, ಮಾಗಿಯಿರುಳ ಬೆಳದಿಂಗಳ ಮರೆಯಿಸುವ ಹುಚ್ಚು ನಗೆಯೂ, ಗಗನಕ್ಕೇರಿ ಗಲ್ಲಿಸಿ ತಾರೆಗಳನು ತುಳುಕಾಡಿಸುವ ಅಟ್ಟಹಾಸವೂ” ಇಂದಿನ ಭಾಗ್ಯವಲ್ಲದಿನ್ನೇನು? “ಅಧರದಲ್ಲಿ ಮುದ್ದಾಗಿ, ಉದರದಲ್ಲಿ ಮುತ್ತಾಗಿ, ಇದಿರು ಮೂರ್ತಿಗೊಂಡು ನಿಂತ ಜೀವದ ಹೂವು! ಬಸಿರಿನ ತಾವರೆಯಲ್ಲಿ ಬೆಳೆದ ಬಾಲಬ್ರಹ್ಮ!!” ಇಂಥ ‘ಮಕ್ಕಳಿದ್ದರು ಚಿಂತೆ’

ಮಾಡುವವರಿಗೆ— “ಹಿಗ್ಗಿನಿಂಗಡಲ ಮನೆ, ಕಾಡಹೂ ಜೇನಹನಿ, ಕನಿಯ ಬಿಳಿಯಹರಳಗಣಿ, ಬಡ ಹುಲ್ಲ ಮೊಂಜು ಮಣಿ'' ಏನಿದ್ದರೂ ಕಾಣಿಸುವದಿಲ್ಲ. ಮಗುವಿನಲ್ಲಿ ಇಷ್ಟೆಲ್ಲ ಐಶ್ವರ್ಯಗಳನ್ನು ಕಾಣುವವರಲ್ಲಿ ನಶ್ವರದ ಅರಿವು, ನಶ್ವರದಲ್ಲಿ ಈಶ್ವರನನ್ನು ಅರಸುವ ತಿಳಿವು ಎರಡೂ ಬೇಕು. ನಮ್ಮ ಕವಿ ಕಂಡ ನಶ್ವರದಲ್ಲಿನ ಐಶ್ವರ್ಯದ ಬಗೆಯನ್ನು ಅರಿತುದಾಯಿತು; ಅದರಂತೆ ಐಶ್ವರ್ಯದಲ್ಲಿನ ನಶ್ವರದ ರೀತಿಯನ್ನು ಅವಲೋಕಿಸುವ. ಅವರು ಮಗುವೆಂದರೆ— “ಸುಖದ ಸೆರೆ; ದುಃಖದ ಮರೆ; ಹಿಗ್ಗಿನ ತೊರೆ ನಗೆಯ ತೆರೆ; ತಳಮಳದ ನೆರೆ ಕಳವಳದ ನೊರೆ” ಎಂದುಕೊಂಡಿದ್ದಾರೆ. “ನನಸಿನ ನೆನೆಯೆ! ಕನಸಿನ ಕೆನೆಯೇ! ಬಳಗದ ಬನದಲ್ಲಿ ಹಣ್ಣಾಗುವೆಯಾ? ಜಗದ ಹುಳಿತಿಳಿಯಲ್ಲಿ ಬೆಣ್ಣೆ ಯಾಗುವೆಯಾ?'' ಎಂದು ಪ್ರಶ್ನಿಸಿದ್ದಾರೆ. ಆ ಮದ್ದಾನೆ, ಆ ಪಾರಿ ವಾಳ, ಆ ಅರಸಂಚೆ, ಆ ಅರಗಿಳಿ, ಆ ಬೆಳ್ಳಕ್ಕಿ, ಆ ಬೆಳುವ, ಆ ನವಿಲು ಆಡಿ, ಕುಣಿದು, ನಲಿದು, ನಡೆದು ತನ್ನ ರಾಜ್ಯಕ್ಕೆ ಹಾರಿಹೋದಾಗ— “ಮಗುವೆಂದು ತಿಳಿದಿದ್ದೆ, ಅದಾಯಿತು ನೀರ್ಗುಳ್ಳಿ! ಮನೆಯವನೆಂದು ತಿಳಿದಿದ್ದೆ ಅವನಾದ ಅತಿಥಿ! ಪಿತನ ಪಾಪದ ಪಿಂಡ ಕಣ್ಮರೆಯಾಯಿತು! ಮಾತೆಯ ಶಾಪದ ಮೂರ್ತಿ ಬಯಲಾಯಿತು! ಸಂಸಾರದ ಸವಿ ಸುಖ ದುಃಖದ ಸರಿಬೆರಕೆಯೆಂದು ಕಲಿಸಿದೆ” ಯೆನ್ನುವಾಗ ಅದೆಂಥ ಬೆಳಕಿನ ತಿಳಿವು ಬೇಕು? ಮಗುವಿನ ಚೆಲುವನ್ನು ಕಾಣುವ ಕಣ್ಣಿನಷ್ಟೇ ಹರಿತ ವಾಗಿ ಅದರ ಸತ್ಯವನ್ನು ತಿಳಿಯುವ ತಿಳಿವು ಬೇಕು; ಅದು ಇಲ್ಲಿ ಇದೆ. ಮಗುವು ಕೂಡ ಸೃಷ್ಟಿಯೇ. ಆದರೆ ಅದರು ಜೀವಸೃಷ್ಟಿ. ತಾನು ಕಾಣುವ ತೀರ ಸಮೀಪದ ಒಂದು ಜೀವಸೃಷ್ಟಿಯನ್ನು ಕಾಣುವ ಕವಿಯ ದೃಷ್ಟಿಯನ್ನು ಅರಿತಮೇಲೆ ಸುತ್ತಲಿನ ಒಂದು ಜಡಸೃಷ್ಟಿಯನ್ನು ನೋಡುವ ಬಗೆಯನ್ನು ಪರಾಮರಿಸಬೇಕು.

## ಸಲಿಗೆಯ ಸೃಷ್ಟಿ

“ಬ್ರಹ್ಮಶಕ್ತಿ ಸಂಯೋಗವೇ ಇರವಿಗೆ ಆದಿ. ನರ-ನಾರಿಯರ ರತಿ ಯಾಗಲಿ, ನರ-ನರರ ಮೈತ್ರಿಯಾಗಲಿ, ನರನಾರಾಯಣರ ಭಕ್ತಿ

ಯಾಗಲಿ ಒಂದೊಡೆದು ಎರಡಾದ ಸತ್ವವೇ ಹೊಂದಿ ಒಂದರ ಅನುಭವ ಪಡೆಯುವ ಅಗಮ್ಯದಾಹ. ಎರಡರದು ಮೂರಾಗುತ್ತಿದೆ. ನೂರಾಗುತ್ತಿದೆ; ಆದರೆ ನೂರರದು ಒಂದಾಗುವ ಹಾದಿ ತೋರುತ್ತಿಲ್ಲ; ಎರಡನ್ನು ಒಂದು ಗೂಡಿಸಿ ಇರವಿನೊಳಗಿನ ಅರಿವಿಗೆ ಹಾದಿ ಮಾಡಿದವರೆಲ್ಲರೂ ದೇವರಾದರು. ಜಡಕ್ಕೆ ರೂಪುಗೊಟ್ಟು ಜೀವವು ಜಡದ ರೂಪುಗೆಡಿಸಿ ತಾನೂ ಅದೃಶ್ಯವಾಗುವದು. ಜಡವು ಜೀವದಿಂದ ಇಷ್ಟು ಭಿನ್ನವಾಗಿದ್ದೂ ಜೀವಕ್ಕಾಗಿ ಜಡವು ಜೀವಿಸಿರುವುದು ಇನ್ನೊಂದು ಅಗಮ್ಯರಹಸ್ಯವೇ ಆಗಿದೆ." ಭೂಮಿ ಕಾಣಿಸಲಿಕ್ಕೆ ಮಣ್ಣು-ನೀರು. ಮಣ್ಣು ವಸುಂಧರೆಯೆನಿಸಿತು; ನೀರು ರತ್ನಾಕರವೆನಿಸಿತು. ಹಾಗೆ ಹೆಸರಿಟ್ಟವರು ದೃಷ್ಟಾರರಲ್ಲದೆ ಬೇರೆ ಏನು? ಬಾಯಿರುಚಿತಪ್ಪಿದ ವೇದಾಂತಿಗಳು ಹೊನ್ನುರನ್ನಗಳಿಗೆ ಮಣ್ಣು ಎಂದರು; ಪ್ರಪಂಚದ ಸಮಗ್ರಲೀಲೆಗೆ ಮಾಯೆಯೆಂದರು. ಆದರೆ ರಸಋಷಿಗಳಿಗೆ ಇದು ಸಮ್ಮತವಿಲ್ಲ. ಮುಂಜಾವಿನ ಥಳಕಿನಲ್ಲಿ ಅವರು "ಮೂಡಲಮನೆಯ ಮುಂದೆ ಮುತ್ತಿನ ನೀರಿನ" ತಳಿ ಹಾಕಿದುದನ್ನೂ, ಆ ಇಂದ್ರಭವನದಲ್ಲಿ "ರತ್ನದರಸದ ಕಾರಂಜಿ ಪುಟಿ" ಯುವದನ್ನೂ ಕಾಣುವರು. ಆಗ ಎಲೆಗಳ ಮೇಲೂ ಹೂಗಳ ಒಳಗೂ ಕಾಣುವ ಹನಿಗಳು ಅಮೃತಬಿಂದುಗಳಂತೆ ತೋರಿ, ಬೆಳಗಾಗುವದರಲ್ಲಿ ಮುಗಿಲ ಮೇಲಿಂದ ಅವನ್ನು ತಂದು ಯಾರು ಇರಿಸಿರಬಹುದು ಎಂದು ಬೆರಗುಗೊಳ್ಳುವರು. ತಂಗಾಳಿಯ ಕೈಯೊಳಗೆ ಹೂವಿನ ಎಸಳಿನ ಚೌರಿಯನ್ನಿತ್ತು, ತುಂಬಿಯ ದಂಡಿಗೆ ಮೈತುಂಬ ಗಂಧಸವರಿ ಹಾರಿಸಿಬಿಟ್ಟಿದ್ದಾರಲ್ಲ! ಗಿಡಗಂಟಿಗಳಿಗೂ ಕೊರಳು ಬಂದಿದೆ; ಅಂತೆಯೇ ಹಕ್ಕಿಗಳ ಹಾಡು ಹೊರಟಿತು! ಕಾಡಿನನಾಡು ಕ್ಷಣದಲ್ಲಿಯೇ ಗಂಧರ್ವರ ಸೀಮೆಯಾಯಿತಲ್ಲ! ಆ ಅಲೌಕಿಕ ಸ್ಪರ್ಶವನ್ನು ಪಂಚೇಂದ್ರಿಯಗಳೆಲ್ಲವೂ ಪಡೆದುದರಿಂದ, ಕಣ್ಣಿಗೆ ಕಾಣಿಸದ ಶಾಂತಿರಸವೇ ಎಲ್ಲೆಡೆಗೂ ಮೈದೋರಬೇಕಾದರೆ ಪ್ರೀತಿಯೆ ಕಾರಣವಲ್ಲದೇನು? ಅರದ ಮೇಲೆ ಅದು ಬರಿ ಬೆಳಗು ಅಲ್ಲ. ಇಂಥ ಕಣ್ಣು ಚೆಲುವ ಚಂದ್ರನನ್ನು ಕಂಡು "ಸಿಂಗರದ ಸಿರಿ, ಮಂಗಲದ ಝುರಿ" ಯೆಂದು ಏಕೆ ಒಡನುಡಿಯಲಿಕ್ಕಿಲ್ಲ? "ವಿಧಿಯಿತ್ತ ಕುಲಡೊಂಕು, ನನ್ನ ಪ್ರೀತಿಯು ಡೊಂಕೆ?" ಎಂದು ಪ್ರೇಮಯೋಗದ ಕವಿ ಕೇಳುತ್ತಾನೆ.

ಅದೇ ಕಣ್ಣು ಸಂಜೆಯಲ್ಲಿ ರಾಗರತಿಯನ್ನು ಕಂಡಿದೆ. ಸಂಜೆಯ ಕಾಲಕ್ಕೆ ಮುಗಿಲಮಾರಿಗೆ ರಾಗರತಿಯ ನಂಜು ಏರಿದೆ; ನೆಲದ ಅಂಚಿಗೆಲ್ಲ ಮಂಜಿನ ಮುಸಕು ಹೇಗೋ ಬಿದ್ದಿದೆ; ಆದರೂ ಅದು ಗಾಳಿಯಿಂದ ಮೇಲಕ್ಕೆದ್ದಿದೆ; ಬಿದಿಗೀಚಂದ್ರನ ಚೊಗಚೀ ನಗೆಹೂ ಮೆಲ್ಲಗೆ ಮೂಡಿ, ಮೇಲೆ ಬೆಳ್ಳಿಯನ್ನು ಕೂಡಿದೆ. ಮಳ್ಳಗಾಳಿಸುಳಿಯು ತನ್ನ ಕಳ್ಳಕೈಯಿಂದ ಸೆರಗನ್ನು ಹಿಡಿಯುತ್ತಲೂ ಮತ್ತೆಮತ್ತೆ ಬಿಡುತ್ತಲೂ ಇದೆ! ಇದರಲ್ಲಿ ಎಳೆಯಚಂದ್ರನು ಚೊಗಚಿಯಂತೆ ಮೂಡಿಸುವ ನಗೆಯಹೂ ಎಷ್ಟು ನಯ! ಎಂಥ ಕೋಮಲ! ಹೂ ಎಂಬ ಮನದುಸಿರು, ನನೆಯಾಗಿ ಮೊನೆಯಾಗಿ ಮುಗುಳಾಗಿ 'ಪುಃ' ಎಂದು ಬಿಟ್ಟುಸಿರೇ ಹೆಸರಾಗಿದೆಯಂತೆ! ಅದರ ಚಂದಕ್ಕೆ ಒಂದೆ ಮೈ ಸಾಲದೆಂಬಂತೆ ನೂರೊಂದು ಮೈದಾಳಿ ಕುಣಿಯುವ ಹೂವಿನ ಸ್ವಚ್ಛಂದವೇನು? ಹೂ ಎಂಬುದು ಹಗುರಾದ ಸವಿಹೆಸರು! ಯಾವ ಹೂವೇನು? ಹುಣಿಸೆಯದೇನು—ಜಾಲಿಯದೇನು? ಪಾರಿಜಾತದಂತೂ ದೇವಲೋಕದ್ದು; ದೇವಮಾನವರೆನಿಸಿದ ರುಕ್ಮಿಣಿ-ಸತ್ಯಭಾಮೆಯರಲ್ಲಿಯೂ ಮೋಹವನ್ನೂರಿಸಿದ್ದು; ಅದನ್ನು ನೋಡಿದ ಕವಿ "ಮಣ್ಣು ನೆಲದಹೂವೆ ಅಲ್ಲ; ಗರ್ವದರ್ಪ ಇದಕೆ ಇಲ್ಲ"ವೆಂಮಾ, ಭೂಮಿಗಿಳಿದ ಗಿಡವು ಮಾತ್ರ ವಿಕಾರಗೊಂಡು "ಸುಮವು ಮಾತ್ರ ಮಧುರಗಾತ್ರ ಪ್ರೀತಿಪಾತ್ರವುಳಿದಿತೆಂ"ದೂ ಅನ್ನುತ್ತಾನೆ. ಅದಕ್ಕೆ ನಯದ ತನುವು, ಮುಟ್ಟಿದರೆ ಮಾಸೀತೆನ್ನುವ ಸತಿಯ ಭಯ, ಮಡದಿಯನಯ ಇರುವದರಿಂದ ಅದರ ಮೂಡು ಮುಳುಗುಗಳೆರಡೂ ಚಿಕ್ಕೆಯೊಡನೆಯೆಂದರೆ ಅಚ್ಚರಿಯಲ್ಲ.

ಪಾರಿಜಾತವು ಚಿಕ್ಕೆಗಳೊಡನೆ ಬಂದರೆ, ಚಂದ್ರಿಕೀ ಚಂದ್ರಮರು ಜೋಡಾಗಿ ಬರುವುದು 'ದನಕರದ ಕಾಲಿನಧೂಳಿ ಸಂಜೆಯ ಹೂಳಿ ಮುಗಿಲುಮುಟ್ಟಿದಾಗ.' ಆ ಜೊತೆಗಾರರಿಗೆ ಚಿಕ್ಕಿಗೆಳತಿಯರು ಕೃತ್ತಿಕೆಯ ಹಾರಹಾಕಿದ್ದಾರೆ; ಆದರಿಂದ ಅವರ ಇದ್ದಬಿದ್ದ ಕೇಡು ಕಳೆಯುವದಂತೆ. ಬೆಳದಿಂಗಳ ಸಿಂಗಾರವಿದ್ದರೂ ಮಣ್ಣನಾಡಿನ ಮಂದಿಯೆಲ್ಲ ನಿದ್ದಿಯ ಪಾಲಾಗುವುದು ಸಹಜವೇ. ಆದರೆ ಸೂಸಿರುವ ನಗೆಯ ಬಗೆಯನ್ನು ಹೀರಿದ್ದರಿಂದ ಟೀಂಹಕ್ಕಿಗೆ ಮದ ತಲೆಗೇರಿದೆ; ಅಂತೆಯೇ

ಅದು ಚೀರುತ್ತ ಗಿಡದಿಂದ ಗಿಡಕ್ಕೆ ಸುತ್ತಾಡುತ್ತಿದೆ; ಕಾಡೂಮೇಡೂ ಬೆಪ್ಪಾಗಿ ಕುಳಿತಿವೆ ಆ ಐಶ್ವರ್ಯನೋಡಿ. ಹಾರಿಹಾರಿ ವೈ ಸೋತ ಗಾಳಿ ಮರಮರದ ಗೊನೆಯಲ್ಲಿ ತೆಪ್ಪಗೆ ಕುಳಿತು ತೂಕಡಿಸುತ್ತಿದೆ; ಜಾಲಿಯೂ ಹೂತು ಸುಗಂಧಿಯಾಗಿದೆ; ಬೇಲಿಯೂ ಗಮಗಮಿಸುತ್ತಿವೆ; ಇನ್ನು ಶಾವಂತಿಯಂಥದು ತಂಪು ಇಡಗಿಸುವುದು ಅಚ್ಚರಿಯೇ? ದಣಿಸಿದ ಹಗಲು ಹಿಂಗಿದೆ; ಕತ್ತಲು ಇಂಗಿದೆ; ಜಗತ್ತೇ ಧವಳಗಂಗೆಯಲ್ಲಿ ಮಿಂದಿರುವಾಗ ಮೋಡಗಳೂ ಬೆಳ್ಳಗಾಗುವವು; ತೆನಿಗಳೂ ಮಾಗುವವು. ಬೆಳದಿಂಗಳ ಹಾಲುಣಿಸು ಎಲ್ಲಕ್ಕೂ ಪಾಡು!

ಕವಿಯ ಬೆಕ್ಕು ಬೆಳದಿಂಗಳನ್ನು ಹಾಲೆಂದೇ ತಿಳಕೊಂಡು ಹಾದುತ್ತಿದೆ! ಚಂದ್ರನನ್ನು ಬೆಣ್ಣೆಯೆಂದೇ ಭಾವಿಸಿ ಮುಗಿಲಿನಂಗಣಕ್ಕೆ ಸಿಟ್ಟನೆ ಸಿಡಿಯುತ್ತಿದೆ!! ಬೆಳದಿಂಗಳಿರುಳಲ್ಲಿ ಸುಗ್ಗಿಯಲ್ಲದಿದ್ದರೂ ಕೋಗಿಲೆ ಕೂಗುತ್ತಿದೆಯಲ್ಲ! ಕಾರಣವೇನು? ಬರುವ ಸುಗ್ಗಿಯ ಕೂಗು ಕಲಿತು ಇಡಬೇಕೆಂದು, ಕೋಗಿಲೆಯು ಈಗಿಂದಲೇ ಕುಕಿಲುತ್ತಿರುವದಂತೆ. ಆ ಸೊಬಗಿನ ಇರುಳಿನಲ್ಲಿ ಕವಿಯು ಇನ್ನೂ ಅಸಂಖ್ಯ ಅಲೌಕಿಕಗಳನ್ನು ಕಂಡಿದ್ದಾನೆ. "ಕೆಲವು ಪಚ್ಚೆಹೊಲವು; ಮುಗಿಲು ಹೀರಕದ ಮನೆ. ಅಡವಿಗಡವಿಯೇ ಹೊನ್ನಬಣಿವೆ. ಅದೇನು ಅಮೃತದ ಅರವಟ್ಟಿಗೆಯೋ, ಹಾಲ ಆಲೀಮನೆಯೋ? ಅತ್ತ ಚಿಕ್ಕೆಗಳು ಚಕ್ಕನೆ ಹೊಳೆದು ಬಿಳಿಮೋಡಗಳ ಮುಸುಕು ಹೊಕ್ಕು ಫಕ್ಕನೆ ಮತ್ತೆ ಹೊರಗೆ ಬಂದು ನಕ್ಕು ನಗಿಸುತ್ತಲಿವೆ;" ಯಾರನ್ನು? ಅಕ್ಕರದ ನೋಟಕರನ್ನು. ಅದು ಚಿಕ್ಕಮಕ್ಕಳ ಆಟವನ್ನು ಸ್ಮೃತಿಗೆ ತರುವದಿಲ್ಲವೇ?

ಬೆಳದಿಂಗಳು ಯಾರನ್ನಾದರೂ ಆಹ್ಲಾದಗೊಳಿಸುವುದು ಸಹಜ. ಆದರೆ ಕವಿಯು ಬೇಸಗೆಯ ಬಿಸಿಲನ್ನೂ ಕಂಡು ಹಿಗ್ಗುಗೊಂಡಿದ್ದಾನೆ. ಬೇಸಿಗೆಯ ಬಿಸಿಲು ಡೇರೆ ಹೊಡೆದಿದೆಯಂತೆ! ಮಧ್ಯಾಹ್ನವೇ ಅದರ ಪಾಹರೇ ಮಾಡುತ್ತಿದೆಯಂತೆ! ಅಂಥ ಸದ್ದುಸುಳಿವಿಲ್ಲದ ಹೊತ್ತಿನಲ್ಲಿ ಕವಿಯು ಹುಣಿಸೆಯ ಮರದ ಕೆಳಗಿದ್ದಾನೆ. ಮೇಲೆ ನೋಡಿದರೆ ಮರವೆಲ್ಲ ಹೂತಿದೆ! ಅದೇನು? ಹುಣಿಸೆಯ ಚಿಗುರು ಮದರಂಗಿ ಬಣ್ಣದ ಉಗುರಾಗಿದೆ! ಬಾಯಿಗೆ ಹಾಕಿಕೊಂಡರೆ ಹುಳಿಯೊಗರು! ಕಾಮನ

ಬಿಲ್ಲಿನ ಕೊಂಬೆಯೇ ಚಿಗಿತಂತಿದೆ. ವೈಚಾಚಿದ ಹುಣಸಿಯ ನೆರಳಿನಲ್ಲಿ ಕುಳಿತರೆ, ಅಂಥ ಬೇಸಿಗೆಯಲ್ಲಿಯೂ ನೀರು ಯಾರಿಗೆ ಬೇಕಾದೀತು ? ಬಿಸಿಲುಗುದುರೆ ಕುಣಿಯುತ್ತಿರಲೊಲ್ಲದೇಕೆ ದೂರದಲ್ಲಿ! ಆದ್ದರಿಂದ ಮಧ್ಯಾಹ್ನದ ಬೇಸರವನ್ನು ಮುರಿದು, ಬಿಸಿಲು ತಂತಾನೆ ಹರಿದು ಹೋಗುವಾಗ ಕವಿಯ ಜೀವದ ಬೇಸರವನ್ನು ಹರಿಸಿ, ಹಾಡುಸುಡಿಸ ಲಿಕ್ಕೆ ಒಂದು ಹೂತ ಹುಣಿಸೆ ಮರವೇ ಸಾಕು! ಆದರೆ "ಹೋಳಿಹುಣ್ಣಿವೆ ಬಿಸಿಲು ಕಾಮ್ಮನ ಸುಡಲೆಂದು ತೆರೆದಿದ್ದ ಉರಿಗಣ್ಣ ತೆರದಲ್ಲಿ''ಯೆಂದು ಬಿಸಿಲಿನ ಸ್ಪರ್ಶಸುಖವನ್ನೂ ಕವಿಯು ಒಂದು ಮಾತಿನಲ್ಲಿ ಉಸುರಿದ್ದಾನೆ:

**ಏಕತಾನ**

ಶ್ರಾವಣ ತಿಂಗಳೆಂದರೆ ಕವಿಗೆ ಹೊಸಜೀವ. ಶ್ರಾವಣವೆಂದರೆ ಕವಿಯ ಪ್ರತಿಭೆ ಕುಣಿಯುತ್ತ ಬರುವಳು; ಹೆಣ್ಣುಮಕ್ಕಳೆಲ್ಲ ತವರು ಮನೆಗೆ ಬಂದಂತೆ. ಶ್ರಾವಣವೆಂದರೆ ಕಾಲೂರಿದ ಮಳೆಗಾಲ; ಕತ್ತೆತ್ತಿದ ಬೆಳೆಗಾಲ. ಆಷಾಢದಲ್ಲಿಯೇ ಭರದಿಂದ ಮಳೆಯು ಸುರಿಯ ತೊಡಗು ವದಷ್ಟೆ! ಆದರೆ ಅದರ ರೀತಿಯು ಬೇರೆಯಾಗಿದೆ. ''ಆಷಾಢದ ಮುಗಿಲು ಬೀಸಾಡಿ ಬಂದವು ಈಸಾಡಿ ಬಂದಂಥ ಆನೆಗಳೇ! ರೋಷದ ತೋಷದ ಬೆಡಗು ಬಿನ್ನಾಣವ ಬೀರುವ ಬಿಂಕದಿ ಮೆರೆಯುವೊಲೇ" ಎಂದು ಕವಿಯು ವರ್ಣಿಸುತ್ತಾನೆ. ಲೋಚನಕೆ ಹುಚ್ಚು ಹಿಡಿಸುವ ಹಚ್ಚಹಸಿರೂ, ಹುಚ್ಚುಹಸಿರೂ ನೆಲವನ್ನೆಲ್ಲ ಆಗಲೇ ಹೊಚ್ಚಿರುತ್ತದೆ. ಅಷ್ಟರಲ್ಲಿ ಹೃದಯ ವಿದ್ರಾವಣವಾದ ಶ್ರಾವಣ ಬರುವದು; ಕಾನನ ವೆಲ್ಲವೂ ಕಾವಣವಾಗುವದು. ಶ್ರಾವಣ ಬಂದರೆ ಪಡುಗಾಳಿ ಹಾಡುವದು; ಗಿಡಬಳ್ಳಿ ಆಡುವದು; ಹೊಲ-ಹುಲ್ಲು ನೋಡುವದು. ನೀರ್ವಕ್ಕಿ, ಬಾನಕ್ಕಿ, ಬೆಳ್ಳಕ್ಕಿಗಳು ಹಾಲಾಗಿ, ಸಾಲಾಗಿ, ಮೇಲಾಗಿ ಹಾರತೊಡಗುವವು. ಮಿನುಗಳು, ಮಿಂಚುಳಿಗ, ಮಿಂಚುಹುಳ ಇವೆ ಲ್ಲವೂ ಮಿಂಚಿನ ಬಳಗವೋ ಎನ್ನುವಂತೆ ತೊಳತೊಳಗುವವು. ಅಹಹ! ಇಷ್ಟೆಲ್ಲ ಚೆಲುವಿಕೆಯನ್ನು ಹೇಳಿಕೊಡುವ ಕಣ್ಣು ಕಣ್ಣೇ? ''ಸೌಂದ ರ್ಯವೆಂಬುದು ಕಣ್ಣಿನ ತುತ್ತಲ್ಲ, ಕಣ್ಣಿಗು ಕಣ್ಣಾಗಿ ಒಳಗಿಹುದಂ"ತೆ! ಇರಲಿ. ಕವಿಯೊಡನೆ ಶ್ರಾವಣದ ಹಗಲು ನೋಡೋಣ. ''ನೆಲಹಸಿರು,

ಹೊಲಹಸಿರು; ಗಿಡಗಂಟಿ ಹಸಿರು. ನೆನೆನೆನಿಸಿ ಅತ್ತಂತೆ ಆಗಾಗ ಮಳೆ; ನಡುನಡುವೆ ಹೊಂಬಿಸಿಲ ಕಳೆ. ಗಾಳಿಗೋಳಿಡುವಂತೆ ಭೋರಾಡುತ್ತಿರುವದು.'' ಇದಕ್ಕೂ ಸೊಗಸಾಗಿ ಶ್ರಾವಣದ ಬರುವು. ಅದು ಪಡುವಲದಿಕ್ಕಿನಿಂದ ಹರಿವಗಾಳಿ ಕುದುರೆಯನ್ನೇರಿ ಪರ್ಜನ್ಯ ಗೀತವನ್ನು ಹಾಡುತ್ತ ಬರುವದು; ಬನದ ಮರದ ಮೇಳವೆಲ್ಲ ಸೋ ಅನ್ನುವದು; ಬಿದಿರು ಕೊಳಲು ನುಡಿಸುವದು; ಮಲೆಯ ಹೆಳಲ ಮುಡಿಸುವದು; ಬಳ್ಳಿಮಾಡ ಬಾಗಿಸುವದು; ಗಿಡಗಳ ತಲೆದೂಗಿಸುವದು. ಮರದ ಹನಿಯ ಮಣಿಗಳನ್ನು ಅತ್ತ ಇತ್ತ ತೂರುತ್ತಲೂ, ಹಸಿರು ಮುರಿವ ತೊಂಗಲನ್ನು ಕೆಳಗೆ ಮೇಲೆ ತೂಗುತ್ತಲೂ ಬರುವದು. ಗುಲಗಂಜಿಯ ತೊಡವನ್ನು ತೊಟ್ಟು, ಹಾವಸೆಯ ಉಡುಪನುಟ್ಟು, ನಗುವ ತುಟಿಯು ನನೆದ ಎವೆಯ ಶ್ರಾವಣನನ್ನು ಕವಿಯು ತರಳ, ಎಂದು ಕರೆಯುವನು ಅವನು ಅಳಲು ನಗಲು ತಡವೇ ಇಲ್ಲ; ಅದೊಂದು ಆಟ ಅವನಿಗೆ. ಆದ್ದರಿಂದ ಕವಿಯ ಪಾಲಿಗೆ ಅವನು ತುಂಟಹುಡುಗ! ''ಮೋಡಗವಿದ ಕಣ್ಣಿನವನಾದ ಮುದಿಯತಂದೆ ಮುಗಿಲರಾಯನು ನಿನ್ನನ್ನೆ ಬಯಸಿ, ಕಣ್ಣು ಕೆನ್ನೆ ತೊಯಿಸಿಕೊಂಡಿದ್ದಾನೆ! ಇನ್ನು, ಬಿಸಿಲಹಣ್ಣು ತಿಂದು ಹೊತ್ತು ಹೆತ್ತಿರುವ ನಿನ್ನ ಭೂಮಿತಾಯಿಯು ನಿನ್ನನ್ನು ನೆನೆನೆನಿಸಿ ಎದೆಯ ಸೆರಗ ನೆನಸಿತು!''ಬಾರೊ ನುಗುವೆ ಶ್ರಾವಣಾ''ಎಂದು ಕವಿ ಅವನನ್ನು ಸ್ವಾಗತಿಸುವುದರಲ್ಲಿ ಅದೆಂಥ ಸಲಿಗೆಯಿದೆ? ಅದೆಷ್ಟು ತಾದಾತ್ಮ್ಯವಿದೆ? ಇನ್ನೊಮ್ಮೆ ಕವಿಯು ಶ್ರಾವಣದ ವೈಭವವನ್ನು ಬಣ್ಣಿಸಿದ್ದು ಹೇಗೆಂದರೆ—''ಏನು ಹಸಿರು! ಏನು ಹಳದಿ! ಹುಲ್ಲು, ಹೂವು ಸಹ ಹಬ್ಬದ ಉಬ್ಬಿನಲ್ಲಿವೆ? ಹುಲ್ಲು ಕಸವು ಸಹ ಬಣ್ಣ ಪಡೆದು ಹೂತು ಹಿಗ್ಗಿನಿಂತಿರುವವಲ್ಲ! ಮಳೆಯ ಬಿಲ್ಲು ಮುರಿದು ಹತ್ತು ಕಡೆಗೆ ಹಂಚಿದಂತೆ! ನೆಲದ ಬಸಿರೇ ರನ್ನರನ್ನದ ತನ್ನ ಸೊಬಗನ್ನು ಕಳಿಸಿದೆಯೇ? ಮಣ್ಣು ಹುಡಿಯ ಕಣಕಣವೂ ಕಣ್ಣು ಪಡೆದ ಹಾಗಿದೆ. ಇದನ್ನು ನೋಡಲೆಂದೇ ಬಾನಿನಂಚಿನಲ್ಲಿ ಮೋಡ ಬಾಗಿದೆ. ಮುಗಿಲು ನೆಲಕ್ಕೆ ಮುಕ್ಕುಚಿಕ್ಕೆ ಕಾಳುಗಳನು ಬಿತ್ತಿದೆ; ನೆಲವು ಮುಗಿಲಿಗರ್ಭಯಿಂದ ಆರತಿಯನ್ನೆತ್ತಿದೆ. ಇಷ್ಟೆಲ್ಲ ಉತ್ಸವ ಏತಕ್ಕಾಗಿ? ಬಸೆರೆಯಾದ ನೆಲಕ್ಕೆ ಹೂ ಮುಡಿಸ

ಬಂದ ಸಂಭ್ರಮ! ಹುಡಿಯಂಥದು ಅರಳಿ ಹೂವಾದ ಮೇಲೆ ಹುಳಕ್ಕೆ ರೆಕ್ಕೆ ಒಡೆಯಲಾರವೇ? ಮುಸುಕು ಹರಿದು ಪಕ್ಕತೆರೆದು ಚಿಟ್ಟೆ ಮುಕ್ತಿ ಪಡೆದವು! ನಯವೇ ರೆಕ್ಕೆಪಡೆದು ಹಾರುತ್ತಿರುವದೇ ? ಛೇ! ಇವೇಕೆ ರೆಕ್ಕೆ ಹುಳಗಳಾದಾವು! ಚಿಕ್ಕರೂಪ ತಾಳಿದ ಚೊಕ್ಕ ಅಪ್ಸರೆಯರೇ! ಯಾಕಂದರೆ ನಕ್ಕು ನಲಿಯುತ್ತಿರುವರು. ಹೂವಿನ ಪಕಳೆಗೆ ಪ್ರಾಣತುಂಬಿ ಚಿಟ್ಟೆಯಾಗಿ ಕಾಂಬವ್ರೋ? ಕುಣಿದು ದಣಿದ ಚಿಟ್ಟೆಗಳ ಪಕ್ಕವೇ ಹೂವು ಎನಿಸಿಕೊಂಬವ್ರೋ? ಅವು ಒಂದನ್ನೊಂದು ತಬ್ಬಿ, ಮುತ್ತಿ ಏಕಜೀವ ವಾಗಿವೆ. ಜಡಜೀವ ಎಂದು ಸುಳ್ಳೇ ಎರಡು ರೂಪವಾಗಿವೆ. ಭೂಮಿ ತಾಯಿ ಜೋಗಿತಿಯಂತೆ, ಹೂವ ಹಡಲಿಗೆಯನ್ನು ಹೊತ್ತಿದ್ದಾಳೆ; ಹೀಗೆಯೇ ಅವಳು ಅನಂತಕಾಲ ಕುಣಿಯುತ್ತಿದ್ದಾಳೆ." ಈ ಪ್ರಕಾರ ಕವಿಯು ಹಲವು ವಿಧದಲ್ಲಿ ಹೊಗಳಿ ಹೊಗಳಿ ಮನವು ತಣಿಯದೆ— "ರೂಪಗಳಿಗೆ ಚಿತ್ರಗಳಿಗೆ ಉಪಮೆಗಳಿಗೆ ಗಣಿಯಿದು" ಎಂದು ಮುಗಿಸುತ್ತಾನೆ.

ಇತ್ತ ಬನ್ನಿರಿ. ಇದೊಂದು ಸಂಜೆ. ಚಿತ್ತಿಯ ಮಳೆಯ ಸಂಜೆ. ಈ ಗುಡ್ಡದ ತಲೆಗೆ ಮೋಡವು ಮುಸುಕೆಳೆಯುವಷ್ಟರಲ್ಲಿ, ಆ ಗುಡ್ಡದ ಮೇಲೆ ಬಿಸಿಲು ಮೈ ಚಾಚುತ್ತದೆ. ತೋಪು ತೋಟದ ಗಾಳಿ ನುಗ್ಗಿ ನುಸುಳಿ ಬಂದು ಹುಲ್ಲುಗಾವಲನ್ನು ಸವರಿ ಬೈತಲೆ ಬಾಚುತ್ತಿದೆ. ಹೊಲದ ದಂಚಿನ ಹಸಿರ ಬಯಲು ಮುತ್ತಿನ ಸೇಸೆ ತಳೆದು, ದುಡಿದವರ ಪಾದ ಕ್ಕೆಂದು ಹಡದಿಯನ್ನು ಹಾಸಿದೆ. ದಿನಗೂಲಿಗೆ ದುಡಿದು ದಣಿದು ತಣಿದು ಹೊರಟವರ ಮುಖಗಳು ಎದೆಯೆತ್ತರ ಬೆಳೆಗೆ ಕಳಸ ಇಟ್ಟಂತೆ ಮೆರೆಯುತ್ತಿವೆ!

ಗುಡುಗು ಮಿಂಚುಗಳಿಗೆ ಹೆದರಿ ಗೂಡು ಸೇರುತ್ತಿರುವವರನ್ನು ಸಾಮಾನ್ಯವಾಗಿ ಎಲ್ಲ ಕಡೆಗೂ ಕಾಣುತ್ತೇವೆ; ಮಳೆ-ಗಾಳಿ-ಬಿಸಿಲುಗಳಿಗೆ ಬೆದರಿ ಆಸರಕ್ಕೋಡುವುದು ಅರಿದಲ್ಲ. ಆದರೆ ಸೃಷ್ಟಿಯೊಡನೆ ತಾದಾತ್ಮ್ಯನಾದ ಕವಿಯು ಹಾಗೆ ಮಾಡುವನೋ ಇಲ್ಲವೋ ತಿಳಿಯದು; ಆದರೆ ಅವನು ಹೇಳುವುದು ಹೀಗೆ—"ಮರಿಗುಡುಗು ಕೆಲೆವಾಗ, ಮಳೆಗಾಳಿ ಸೆಳೆವಾಗ ನಾವ್ಯಾಕ ಮನೆಯಲ್ಲಿ ಅವಿತು ಕೂತೆವು? ಕೋಲ್ಮಿಂಚು

ಇಣಿಕಿಣಿಕಿ, ಕಣ್ಣು ಕುಣಿಸಿ ಕೆಣಕೆಣಕಿ ಬಾಗೆಣೆಯ ಹೊರಗೆ ಅನುವಾಗ ಒಳಸೇರಿ ಹರೆಮೊರಿದಂತೆ ಕುಳಿತೆವಲ್ಲ! ಮಳೆ ಬರುತ್ತಿದೆ ಬನ್ನಿ! ಇಳೆಯೊಡನೆ ಜಳಕ ಮಾಡೋಣ; ಮೋಡಗಳ ಆಟವನ್ನು ನಾವೂ ನೋಡೋಣ.” ಕವಿ ಒಂಟಿಗನಾಗಿ ಹೊರಬೀಳಲಿಕ್ಕೆ. ಹೆದರುವನಾದರೂ, ಜೊತೆಗಾರರು ಸಿಕ್ಕರೆ ಹೊರಬೀಳಲಿಕ್ಕೆ ಹಿಂಜರಿಯುವಂತೆ ತೋರುವದಿಲ್ಲ. ಅಂತೆಯೇ ಗುಂಪುಕಟ್ಟಿದ್ದಾನೆ. ಗೆಳೆಯರ ಗುಂಪು. ಗುಂಪಾಗಿರುವುದು ಸಿಂಹದ ಸ್ವಭಾವವಲ್ಲವಾದರೂ ಆನೆಗಳ ಲಕ್ಷಣ. ಇರಲಿ.

“ಪಾತರಗಿತ್ತಿ ಪಕ್ಕ”ದಲ್ಲಿ ತುಂಬಿರುವ ಪ್ರಾಣವಾಯುವನ್ನು ಬಹುಜನ ವಿಮರ್ಶಕರು ಹೊಗಳಿದ್ದಾರೆ. ಅದು ಸೃಷ್ಟಿ ವ್ಯಾಪಾರಗಳಲ್ಲಿ ಕವಿ ಸಮರಸನಾಗುವ ರೀತಿಯನ್ನು ತೋರಿಸುತ್ತದಂತೆ! ಆ ಪಕ್ಕವೆಂದರೆ ಗಾಳಿಯ ಕೆನೆಯಿಂದಲೇ ಮಾಡಿದವು; ರೇಶಿಮೆಗಿಂತ ನಯವಾದ ಅವನ್ನು ಮುಟ್ಟಲಿಕ್ಕೂ ಭಯವೆನಿಸುತ್ತದೆ. ಅದರ ಸ್ನಾನ ಕಿರೇಸೂರೇಪಾನದ ಧೂಳಿಯಲ್ಲಿ; ಅದರ ದಿನದ ಊಟ ತುರುಬಿತುಂಬಿ ತೋಟದಲ್ಲಿ. ಅದು ಕಳ್ಳಿಹೂವನ್ನು ಕಡಿಯುತ್ತದೆ; ಹೂವಿನ ತುಟಿನೀರು ಕುಡಿಯುತ್ತದೆ. ನಾಯಿಯ ಛತ್ತರಿಗೆಯಲ್ಲಿ ಕೂತು ಮೋಜು ಮಾಡುತ್ತದೆ. ಮಾಲಿಂಗನ ಬಳ್ಳಿಯೇ ಅದರ ತೂಗುಮಂಚ! ರುದ್ರಗಂಟಿ, ವಿಷ್ಣುಗಂಟಿ, ಹೇಸಿಗೆಯ ಹೂ ಒಂದೂ ಬಿಡುವದಿಲ್ಲ ಪಾತರಗಿತ್ತಿ! ಹುಲ್ಲ ಹೊಲದಲ್ಲಿ ಗುಬ್ಬಿ ಬೆಳಸಿ ತಿಂದು, ಕುಣಿದು ದಣಿದು, ಸಿಕ್ಕಲ್ಲೋಡಾಡಿದರೂ ಗಾಳಿಯೊಡನೆ ಒಮ್ಮೆ ಓಡಿಹೋಗುವದು ಎಲ್ಲಿಗೆ ನಂದನವನಕ್ಕೆ? ಕವಿಯ ಜೀವನವೂ ಹಾಗೆಯೇ! ಅವನ ಓಟವೆಲ್ಲವೂ ನಂದನವನದ ಕಡೆಗೇ!!

---

# ೩. ಆತ್ಮವಿಹಾರ

## ಹೃದಯ ಕ್ಷೇತ್ರ

ಕವಿತೆ ಹೃದಯದ ಮಾತು; ಕಕ್ಕುಲತೆಯ ತಾಯಿಯ ರೀತಿ ಅದ ಕ್ಕಿರುತ್ತದೆ. ಹೃದಯವು ಭಕ್ತಿಯ ನೆಲೆ; ಅಂತರಾತ್ಮನ ಅರಮನೆ. ಅಲ್ಲಿ ಆನಂದವಿದ್ದರೆ, ಹೊರಸೂಸುವ ನುಡಿಯಲ್ಲಿಯೂ ಆನಂದ ಹರಿಯ ಬೇಕಲ್ಲವೇ? ತಾನೇ ಆನಂದವನ್ನು ಕಾಣದ ಒಣಮೂಳವು ಹೆರರಿಗೇನು ಉಣಸೀತು! ಸುಖದ ತೆನೆಯಿಂದ ಆನಂದವನ್ನು ಕರೆಯುವಂತೆ ದುಃಖದ ವೊನೆಯಿಂದಲೂ ಆನಂದವನ್ನು ಕರೆಯಬಹುದು. ಆನಂದವು ಸುಖದ ಆಮಿಷವೂ ಅಲ್ಲ; ದುಃಖದ ವಿಷವಂತೂ ಅಲ್ಲವೇ ಅಲ್ಲ. ಆನಂದವು ಹೃದಯ ರಾಜ್ಯಕ್ಕೊಡೆಯನಾದ ಹೃತ್ಪುರುಷನ ಸೊತ್ತು; ಹೃತ್ಪುರುಷನ ತೊತ್ತಾಗಿ ಅವನನ್ನು ಪ್ರಸನ್ನಗೊಳಿಸಿದರೆ, ತನ್ನ ಸೊತ್ತನ್ನು ಕರುಣಿಸಬಲ್ಲನು. ಹೃತ್ಪುರುಷನನ್ನು ಪ್ರಸನ್ನಗೊಳಿಸುವ ದಾರಿ ಭಕ್ತಿಯೊಂದೇ. ''ಭಕ್ತಿಯು ರಸಗಳ ತಾಯಿ. ನಿರತಿಶಯ ಪ್ರೇಮಕ್ಕೆ ಆಸ್ಪದ ಕೊಡುವುದೇ:ಆನಂದ. ಅಂಥ ಪ್ರೇಮಸ್ವರೂಪವೂ, ಶಾಂತ ಆನಂದ ರೂಪವೂ ಆದದ್ದೇ ಭಕ್ತಿ. ಲಿಂಗದ ಶಕ್ತಿ ಅಂಗದಲ್ಲಿ ಭಕ್ತಿ. ಸ್ವಚ್ಛಂದವೂ ಸ್ವಯಂಭುವೂ ಆದ ಆತ್ಮಪ್ರೀತಿ ಎಂಬ ಅಪರ ನಾಮವುಳ್ಳ ಭಕ್ತಿಯು ಕವಿಜೀವದ ಲಕ್ಷಣ. ಶೃಂಗಾರ ವೀರ ಕರುಣಾದಿ ನವರಸಗಳಲ್ಲಿ ಹೃದಯಂಗಮವಾದದ್ದು ಭಕ್ತಿವೃತ್ತಿಯ ಅಂಶವೆಂದೇ ಹೇಳಬಹುದು. ಜಗತ್ತಿನೊಳಗಿನ ಎಲ್ಲ ಮಹಾಕಾವ್ಯಗಳು ಭಗವಂತನ ಅಥವಾ ಅವನ ತೇಜಾಂಶದ ಕೀರ್ತನೆಗಳಾಗಿವೆ.'' ಆದ್ದರಿಂದ ಮಹಾಕಾವ್ಯಗಳನ್ನು ಬರೆದು ಭಗವಂತನ ತೇಜಾಂಶವನ್ನು ಕೀರ್ತಿಸುವುದಕ್ಕಾಗಿ ಹೃತ್ಪುರುಷನನ್ನು ಪ್ರಸನ್ನಗೊಳಿಸುವ ಉದ್ಯಮಕ್ಕೆ ತೊಡಗಬೇಕೇ? ಅದು ಎಲ್ಲರಿಗೂ ಸಾಧ್ಯವೇ? ಮಹಾಕಾವ್ಯ ಬರೆಯುವುದು ಎಲ್ಲರಿಗೂ ಸಾಧ್ಯವಿಲ್ಲ. ಆದರೆ ಭಕ್ತಿಯನ್ನು ಗಳಿಸುವುದರಲ್ಲಿ ಪ್ರತಿ ಒಬ್ಬರು ಸ್ವಲ್ಪವಾದರೂ ಯಶಸ್ಸನ್ನು ಪಡೆಯಬಹುದು. ಭಕ್ತಿಯು

ಜೀವನಿಗೆ ಸಹಜ ಹಾಗೂ ಸ್ವಾಭಾವಿಕ. ಉತ್ತಮ ಜೀವನವನ್ನು ದೊರೆಕಿಸಲಿಕ್ಕೆ ಭಕ್ತಿಬೇಕು; ಭಕ್ತಿಯು ನೆಲೆಯಾದ ಹೃದಯವುಳ್ಳವನೇ ಶ್ರೇಷ್ಠ ಮನುಷ್ಯನೆಂದು ತಿಳಿಯಲಾಗುವದು. ಜೀವನಕ್ಕಾಗಿ ಭಕ್ತಿ, ಭಕ್ತಿಯಿಂದ ಆನಂದ; ಆನಂದದಿಂದ ನಲ್‌ನುಡಿ ಬಂದರೆ ಬರಲಿ; ಅದು ಬಂದಾಗ ಬಳಸಿಕೊಳ್ಳೋಣ. ನಲ್‌ನುಡಿಗಾಗಿ ಹೃದಯಕ್ಷೇತ್ರದ ಕೃಷಿ ಮಾಡದೆ, ಜೀವನಕ್ಕಾಗಿ ಆ ಕೃಷಿಗೆ ತೊಡಗಬೇಕು. ಜೀವನ ಚತುರರು ಆ ಕೃಷಿಯನ್ನು ತಾವು ಮಾಡುವದಕ್ಕಿಂತ, ಬಲ್ಲಿದನಾದ 'ಎದೆಯ ಒಕ್ಕಲಿಗ'ನಿಗೇ ಒಪ್ಪಿಸುವರು. ನಮ್ಮ ಕವಿ ಸಹ ಹಾಗೆಯೇ ಮಾಡಿದ್ದಾರೆ. "ಗರುವ ಗ್ರಹಿಕೆಗಳೆಂಬ ಹುಲ್ಲು ಕರಿಕೆಗಳಿಂದ ಸರುವವೂ ಕೆಟ್ಟಿಹುದು; ನಟ್ಟು ಬೆಳೆದಿದೆ. ಕಾಡಿನಂದದಿ ಕರಲು, ಕಲ್ಲಿನಂದದಿ ಎದೆಯು ಆಗಿದ್ದರಿಂದ ಮಾಡಿದ್ದ ಬೇಸಾಯ ಮಣ್ಣುಗೂಡುವದಯ್ಯೋ! ನಿನಗೆ ಕೋರಪಾಲಿನ ಮಾತುಕೊಟ್ಟಿದ್ದೇನೆ. ಆದ್ದರಿಂದ ಪಾರು ಮಾಡಯ್ಯ— ಹೊಟ್ಟೆಗಿಲ್ಲದೆ ಸಾಯುವೆನು" ಎಂದು ಹದಬೆದೆಯನರಿತಂಥ ಹೃದಯವಾಸಿ 'ಎದೆಯಒಕ್ಕಲಿಗ'ನಿಗೆ ಒಪ್ಪಿಸಿದ್ದಾನೆ. ಅಂದ ಮೇಲೆ ಫಲಸು ಬರುವುದರಲ್ಲಿ ಸಂಶಯವೇನು? ಆ ಫಲಸವೇ ಭಕ್ತಿ; ಅದುಳ್ಳವನೇ ಭಕ್ತ. "ಸಾಹಿತ್ಯಕವಿಗಳಿಗಿಂತ ಭಕ್ತಕವಿಗಳ ಸತ್ವ ಹಿರಿಯದು. ಭಕ್ತನು ತನ್ನ ಜೀವನವನ್ನೆ ಕಾವ್ಯವಸ್ತು ಮಾಡಿ, ಜೀವಿತವನ್ನೇ ದಿವ್ಯಕೃತಿಯನ್ನಾಗಿ ಮಾಡಬಲ್ಲನು." ಅಂಥವರೇ ತನುವಿಲ್ಲದಲ್ಲಿ ಪ್ರಾಣಪ್ರತಿಷ್ಠೆ ಮಾಡುವ ಕವಿಗಳು.

## ಇಳಿದು ಬಾ

ಹೃದಯಕ್ಷೇತ್ರದ ಕೃಷಿಸಾಗಿತು; ಆದರೆ ಮೇಲಿನಿಂದ ಕೃಪೆಯ ಮಳೆ ಸುರಿಯಬೇಕಷ್ಟೇ? ಮೇಲೆ "ದೇವರ ರತ್ನಾಭರಣದ ನಕ್ಷತ್ರದ ಲೋಕ; ನೆಲದಲಿ ಮಲೆಯೊಳು, ಮರದಲೆಯಲಿ ಪುಷ್ಪಾಲೋಕ" ಏನಿದ್ದರೂ ತಾನುಣ್ಣದೆ ಹೊಟ್ಟೆ ಹೇಗೆ ತುಂಬುವದು? ಹೊಟ್ಟೆ ತುಂಬದಿದ್ದರೆ— "ಇಗೊ ಮರಣವು ಅಗೊ ಜನನವು" ಎಂಬ ಜೀವನದುಸಿರಾಟದಿಂದ ಹಸಿವೆ ಹಿಂಗಲಾರದು. ಕ್ಷಣಕ್ಷಣಕ್ಕೂ ಆಕಾಶವು ಹೊಸ

ಹೊಸದಾಗುವುದೂ, ದಿನದಿನವೂ ಗ್ರಹಮಾಲೆಯ ರಿಂಗಣ ಕುಣಿತವೂ ಯಾಕೆ? ''ತಿರುತಿರುಗಿಯ ಹೊಸತಾಗಿರಿ'' ಎನ್ನುತ್ತಿದೆ ಋತುಗಾನ. ಹೊಸದಾಗಿಸುವ ಕಳೆಯು ಮುಗಿಲಮುಳೆಯಂತೆ ಇಳಿದು ಬರಬೇಕಷ್ಟೇ? ಆ ವಿಶ್ವಾಸವು ಕವಿಗಿದೆ. ತೆರೆಮರೆಗಳನೆತ್ತರಿಸಿ ತೊಡಕುಗಳನು ಕತ್ತರಿಸಿ ಅವನ ಬೆಳಕ ಬಿತ್ತರಿಸಿ ಶಕ್ತಿಯೊಂದು ಬರುವದೆಂದೂ, ಆ ಶಕ್ತಿ ಅಲಗಿನಂತೆ, ಈ ಪ್ರಪಂಚ ಗಲಗಿನಂತೆ, ಅದುವರೆಗೂ ಮಲಗಿದಂತೆ ನಾವು ತಾಳಿಯಿರುವದೆಂದೂ ಕವಿಗೆ ತಿಳಿದಿದೆ.

ಬಂದಾಗ ಬರಲೆಂದರೂ ಒಮ್ಮೆ ಜೀವ ಬೇಸರಿಯುವದು; ಉರುಳಿ ಹೋದ ದಿನಗಳನ್ನೂ, ಮುಂದಿನ ಅನಿಶ್ಚಿತ ಆಯುಷ್ಯವನ್ನೂ ಬಗೆಯುವುದು. ''ನೋಡನೋಡುತ್ತ ದಿನಮಾನವೂ ಆಡಆಡುತ್ತ ಆಯುಷ್ಯವೂ ನಡೆದದೆ; ನಡೆದದೆ; ನಡೆದಿದೆ. ಕಾಣದ ಕಡಲಹಾದಿ ಹಿಡಿದಿದೆ'' ಎಂದು ನಿಟ್ಟುಸಿರುಬಿಡುತ್ತದೆ. ''ಹರೆಯೊಂದು ಹರಿನೀರು, ತಿರೆಯೊಂದು ಕರಿನೀರು, ಎದೆಯು ಮುನ್ನೀರು, ಜನುಮವಂತೂ ಹರಿಗಡಿಯುದ ಹೋಳಿನೀರು.'' ಆದ್ದರಿಂದ ಅದು ಸ್ಥಿರವಲ್ಲ. ''ಸಾವಿನ ಕುರುಹನು ಅನುದಿನ ಕಂಡೆ'' ನೆನ್ನುವನು. ನೊಂದು ನೊಂದು 'ಬದುಕುವದು ಇನ್ನೆಂದು?'' ಅಂದುಕೊಳ್ಳದಿರುವನೇ? "ದಿನ ಬೆಳಗು ಅಂತೇನ— ಆ ದಿನ ಬಂತೇನ?'' ಹೀಗೆ ಅನಿಶ್ಚತವಾದ ಜೀವಕ್ಕೊಂದು ಹಿಗ್ಗುಗೊಡಲಿಕ್ಕೆ ಸಂಗಡಿಗ ಬೇಕಾಗುತ್ತದೆ. ಕವಿ ಕಿನ್ನರಿಯನ್ನು ಹಿಡಿದಿದ್ದಾನೆ; ಅದರ ಜೀವದ ತಂತಿಯನ್ನು ಮಿಡಿದಿದ್ದಾನೆ. ಕಿನ್ನರಿಯ ಸಂಗತಿಯೆಂದರೆ ''ಮುಳಗಾಂವ ಬೆಂಡಿಗೆ ತೆಕ್ಕಿಮುಕ್ಕಿ ಬಿದ್ದಾಂಗೆ'' ವೇ ಸೈ.

## ಸಮರಸ

"ರಸವೆ ಜನನ, ವಿರಸ ಮರಣ, ಸಮರಸವೇ ಜೀವನ. ಆದುದರಿಂದ ಸಮರಸವುಳ್ಳ ಜೀವನವೇ ಜೀವನ. ವಿರಸ ಪ್ರಸಂಗಕ್ಕೆ ಹೆದರಿ ಬೆದರಿ— "ಕೆನೆ ಹಾಲು ದಕ್ಕಲಿ. ಅದನು ಕಕ್ಕಿಸಬೇಡ, ನಂಜಿನ ಸೆರಗ ಬೀಸಾಡಿ" ಎಂದು ಎಚ್ಚರ ಕೊಡಬೇಕಾಗುತ್ತದೆ. ಆದರೆ ಸಮ

ರಸದ ದಾರಿಯೇನು? ಪ್ರೀತಿಯೇ? ಪ್ರೀತಿ ಎಂಬ ಮಾತು ಕೇಳಿ ರೆಕ್ಕೆ ಗೊಂಡು ಕೈಲಾಸಕೇರುವದಾದರೂ, ಅಲ್ಲಿ ಬಂದ ಅನುಭವವೆಂದರೆ— "ಪ್ರೀತಿ ಪ್ರೇತ, ಮಹಾಭೂತ!" ಬೂದಿಬಡಕ ಗಂಡಿನಲ್ಲಿ ಬಳ್ಳಿಯಂಥ ಮಳ್ಳ ಹೆಣ್ಣು ನವರಸವನ್ನುಂಡಿತಾದರೂ ತಬ್ಬಿ, ಉಬ್ಬಿ, ಕೆಲೆದು, ನೆಗೆದು ಗಂಡನ್ನು ಕೆಡಹಿ ಕುಣಿದಿತು; ತುಳಿದು ತುಳಿದು ದಣಿದಿತು! ಅಬ್ಬಬ್ಬ! ಏನು! ಪ್ರೀತಿ?? ಹಾಗಾದರೆ ಪ್ರೀತಿ ಸುಳ್ಳು. ಹೊಸ ಜೀವನಕ್ಕೆ ಹೊಸ ಯುಗ ಬೇಕು. ಅಗೋ, ಯುಗ ಅಲ್ಲದಿದ್ದರೂ ಯುಗಾದಿ ಬಂದಿತು. ಆ ಯುಗಾದಿಯು— "ಅಖಿಲ ಜೀವಜಾತಕೆ ವರುಷಕೊಂದು ಹೊಸ ಜನ್ಮವನ್ನೂ, ಹರುಷಕೊಂದು ಹೊಸ ನೆಲೆ ಯನ್ನೂ ಕೊಡುತ್ತದೆ. ಅಲ್ಲಿ ನೋಡಿ, ಹೊಂಗೆ ಹೂವ ತೊಂಗಲಲ್ಲಿ, ಭೃಂಗದ ಸಂಗೀತಕೇಲಿ ಮತ್ತೆ ಕೇಳಿ ಬರುತಿದೆ. ಇಗೋ ಇಲ್ಲಿ ಬೇವಿನ ಕಹಿ ಬಾಳಿನಲ್ಲಿ ಹೂವಿನ ನಸುಗುಂಪು ಸೂಸಿ ಜೀವಕಳೆಯ ತರುತಿದೆ. ಆದರೆ, ಒಂದೇ ಒಂದು ಜನ್ಮದಲ್ಲಿ ಒಂದೆ ಬಾಲ್ಯ, ಒಂದೆ ಹರಯ! ಹೀಗೆ ನಮಗಷ್ಟೇ ಏತಕೆ? ನಿದ್ದೆಗೊಮ್ಮೆ ನಿತ್ಯಮರಣ, ಎದ್ದಸಲ ನವೀನ ಜನನ, ನಮಗೆ ಏಕೆಬಾರದೋ?? ಎಂದು ಕೇಳಿಕೊಳ್ಳುವ ಜೀವವು ಹೊಸ ಬಾಳಿಗಾಗಿಯೂ ಅದರಲ್ಲಿ ಸಮರಸಗೊಳ್ಳುವುದಕ್ಕಾ ಗಿಯೂ ಅದೆಷ್ಟು ಹಾತೊರೆಯುತ್ತಿರಬಹುದು. ಹೀಗೆ ಹಾತೊರೆದರೂ ಗತಿಕಾಣದಿದ್ದರೆ, ಅದು ಮಂಜಿಬ್ಬನಿಗಳು ಎರೆಯುವ ಠಾವಾಗಿ, ಅಲ್ಲಿ ಒಂದು ಹೂ ಹುಟ್ಟುವದು. ಮೂಸಿದರೂ ವಾಸನೆಯಿಲ್ಲ ಅದಕ್ಕೆ. ಅದನ್ನು ಹುಡುಕಲು ಅಳಿ ಬರುವುದೇ ಇಲ್ಲ; ಸುತ್ತಲಿನ ಗಾಳಿ ಬಿಸು ಸುಯ್ದರೂ ಅದಕ್ಕೂ ಈ ಹೂ ಬಾಡದು. ನೇಸರುಕಣ್ಣನು ಕೆಕ್ಕರಿಸಿದರೂ, ತಿಂಗಳು ಮುಳು ಮುಳು ಬಿಕ್ಕಳಿಸಿದರೂ, ಋತುಗಳ ಬಣ್ಣ ತಿರುಗು ತ್ತಿದ್ದರೂ, ಬೆಟ್ಟಸವೆದು ಇಳೆನೆರಗುತ್ತಿದ್ದರೂ ಪ್ರಕೃತಿ ಪುಟದಲ್ಲಿ ಈ ಹೂವಿನ ಚಿತ್ರ, ಬರೆದೊಲು ಇದ್ದೊಲುಇತ್ತು. ವಿಚಿತ್ರ! ಇದೇ ನಿರಾಶೆಯ ಹೂ. ಹೊಸಕಾಲವು ಬರಲಿಲ್ಲ; ಬರುವ ಯುಗಾದಿ ಹೊಸಕಳೆ ತರುವ ದಿಲ್ಲ. ಆದರೆ ಕೀರ್ತಿಯಾದರೂ ಆ ಕೆಲಸ ಮಾಡೀತೇ? ಉಸುರಿನ ಕಡಲಿನಲ್ಲಿ ಹೆಸರ ಹಡಗಗಳೆಷ್ಟೋ ತೇಲುತ್ತಿವೆ; ಆದರೆ ಉಸಿರುಗುಳ್ಳೆ

ಯೊಡನೆ, ಪ್ರತಿಹಡಗು ಒಡೆದೊಡನೆ ಸಾಕಾಗಿ ಮುಳುಮುಳುಗಿ ದಣಿಯು ತಿಹುದು. ಅದನ್ನು ಕಂಡು ತೆರೆನೊರೆಯಲಿತಿಹಾಸ ನಗುತಲಿಹುದು. ಆ ಕೀರ್ತಿಕಾಂಕ್ಷಿಯಾದ ಬಡಪ್ರಾಣಿಯು ಇಲ್ಲೇನು ಉಣ್ಣುವನು? ಕಣ್ಣೀರು; ಜೊಳ್ಳೆಳ್ಳುತಣ್ಣೀರು; ಮೇಲೆ ಕೀರ್ತಿಯ ಶುಭ್ರಕಾಕಪಿಂಡ ಅಷ್ಟೇ! ಆದುದರಿಂದ ಅಮೃತ ಕೀರ್ತಿಯ ತಿರುಳು, ಮೋಡಗಳ ನೀರ್ನೆರಳು ಇದ್ದಹಾಗೆ. ಅಂತೆಯೇ ಕವಿ— ವ್ಯರ್ಥ ಜನ್ಮವು ಬೇಡ, ರಿಕ್ತ ಕೀರ್ತಿಯು ಬೇಡ. ಇದ್ದವರ ಎದೆಯಲ್ಲಿ ತನ್ನ ಬಗೆ ಇರಲಲ್ಲಿ ಸಪ್ತಸ್ವರ್ಗಕ್ಕೂ ಅದು ಹೆಚ್ಚು ತೂಕ'' ಎಂದು ನಿರ್ಧಾರಕ್ಕೆ ಬರುವನು. ಇದು ಸಮರಸದ ದಾರಿ.

## ಮುಗಿಲಿನಂಗಣದಾಗ

ಧ್ಯೇಯವು ಕಲ್ಪನಾರಾಜ್ಯದ ಚರಮಸೀಮೆಯಲ್ಲಿ ಅಧಿಷ್ಠಿತವಾದ ಮೂರ್ತಿ. ಅದನ್ನು ಸಂಧಿಸಲು ಮುಗಿಲಿನಂಗಣದೊಳಗಿಂದ ಹಾಯ್ದು ಹೋದ ಹಾದಿ ತುಳಿಯಬೇಕಾಗುವದು. ನೆಲದ ಹುಡಿಯಲ್ಲಿ ಹೊರಳಾಡುವ ಕುಸ್ಸಿ ಮಾನವಗೆ ಆ ಹಾದಿ ಕನಸಿನ ಮಾತೇ ಸರಿ; ಆದುದರಿಂದ ಮುಗಿಲಿನಂಗಣದ ಪಯಣಿಗನಿಗೆ ದೊರಕೊಳ್ಳುವುದು ಮುಗಿಲಮಲ್ಲಿಗೆ ಯೆಂದೇ ತೋರಿದರೆ ಆಶ್ಚರ್ಯವೇನು? ಆ ಮುಗಿಲಮಾರ್ಗದ ಸಿದ್ಧತೆಯನ್ನು ನಮ್ಮ ಕವಿಯು ಮಾಡಿಕೊಂಡಿದ್ದು ಹೇಗೆಂದರೆ— ''ಬಿಸಿಲು ಗುದುರೆಯ ಹೂಡಿ ನನ್ನಯ ಮನೋರಥಕೆ ದೆಸೆಯಿಲ್ಲದಂಥ ದಿಶೆಗೀಗ ದೂಡುವೆನದನು; ಮುಸೆಮುಸೆದು ತುಂಬುವೆನು ಬತ್ತಳಿಕೆಯನ್ನು ಹೊಸ ಹೊಸ ವಿಚಾರಗಳಿಂದ.'' ಯಾಕೆಂದರೆ, ದೊರೆವಾಡುಗಳ ಸೀಮೆಗಳ ಸಾಮ್ರಾಟನಾಗಿ ಆಳಬೇಕೆಂಬ ಹಸಿಹಂಬಲು ತುಂಬಿರುತ್ತದೆ ಆದರೂ ''ಏನು ಆಗುವದೆಂದು ನಾನು ನೋಡುತ್ತೀಗ। ನೀನು ಮಾಡುವುದನ್ನು ಜಪ್ಪಿಸಿಹೆನು॥ ಮಾಡುವುದೂ ಬಿಡುವುದೂ ಕೂಡಿಹುದು ನಿನ್ನನ್ನು। ಮಾಡು ಬಿಡು ನನ್ನ ಹಿತಬಂಧು ನೀನು'' ಎಂದು ನಿಶ್ಚಿಂತನಾಗಿರುತ್ತಾನೆ. ಅಂಥ ನಿಶ್ಚಿಂತೆಯೊಡನೆ ದೃಢವಾದ ಆತ್ಮವಿಶ್ವಾಸವೂ ಮೇಳವಿಸಿದರೆ, ಅಲ್ಲಿ ಪೌರುಷಕ್ಕಾರಂಭವಾಗುತ್ತದೆ. "ರೆಕ್ಕೆಗಳ ಜೀವವಿರೆ

ಹಕ್ಕಿ ಹೆದರುವದೇನು? ಕುಕ್ಕಿನೆತ್ತಿಯುನದನು ಕೆಡಬಹುದೇ?'' ಎಂದು ಕೇಳುವ ಧೈರ್ಯ ಬಂದಿರುತ್ತದೆ. ''ಸುತ್ತಿರುವ ಬೆದರಿಕೆಯ ಬಟ್ಟೆಯನು ಕಳೆದೊಗೆದು! ಬತ್ತಲಾದೆನು ಬಾಲನಂತೆ ನಾನು'' ಎನ್ನುವ ನಿರ್ಭಯವು ತಲೆದೋರಿರುತ್ತದೆ. ಆದರೆ ಒಳಗಿನ ಒಳಗಿನ ಒಳದನಿ ಕೇಳುತ್ತದೆ— ''ಯೋಗವಿಲ್ಲದೆ ತಿಳಿಯದೆನ್ನ ವೆಸನ. ಆದಿ ಅಂತವು ಇಲ್ಲದಂಥ ತ್ಯಾಗಬೇಕು. ಗಂಡುಸಾದರೆ ನಿನ್ನ ಬಲಿ ಕೊಡುವೆಯೇನು?" ಅದನ್ನು ಕೇಳಿ ಮನವು ನಡುಗುವುದೂ, ತನುವು ನವಿರಿಗೊಳಗಾಗುವುದೂ ಸಹಜವಲ್ಲವೇ? ತನುಮನಗಳು ಗಟ್ಟಿಗೊಳ್ಳುವವರೆಗೆ "ಬೆಳ್ಳಿಯ ಹಳ್ಳಿಯ ಮೇರೆಯ ಮೀರಿ, ತಿಂಗಳಿನೂರಿನ ಸೀರನು ಹೀರಿ, ಮಂಗಳ ಲೋಕದ ಅಂಗಳ ಕೇರು" ವುದೂ, ದಿಙ್ಮಂಡಲಗಳ ಅಂಚನ್ನು ಮುಟ್ಟಿ ತನ್ನ ಚುಂಚನ್ನು ಆಚೆಗೆ ಚಾಚುವುದೂ ಹಕ್ಕಿಗೆ ಆಗದೆ, ಆ ಮಾತು ಮುಗಿಲಿನಂಗಣದ ಮೊಳಗು ಮಾತ್ರ ಆಗಿ ಉಳಿಯುವದು.

## ನಿವೃತ್ತಿ-ಪ್ರವೃತ್ತಿ

ಕನಸು ನನಸಾಗಬೇಕಾದರೆ ತ್ಯಾಗಬೇಕು; ಆತ್ಮವನ್ನು ಬಲಿಕೊಡಬೇಕು. ಆಗ ಉಪಾಸಿಸುವ ದೈವತವು ಒಲಿಯುವದು, ಪ್ರಸನ್ನವಾಗುವದು. ಅದರ ಮನವರಿಕೆಯಾದುದರಿಂದಲೇ ಕವಿ ''ದೇವನಲ್ಲಿ ನಿವೃತ್ತಿ, ದೇವನಿಂದ ಪ್ರವೃತ್ತಿ" ಯೆಂದೂ, ''ದುಡಿದು ಪಡೆದವ ಜಾಣ, ವ್ಯಸ್ತನಾದವ ಕೋಣ" ಎಂದೂ ಹಾಡಿದ್ದಾನೆ. ಆದರೆ ಆ ದೇವನಾರು? ಯಾರಿಗಾಗಿ ತ್ಯಾಗ ಮಾಡಬೇಕು? ಯಾರಿಗೆ ಆತ್ಮಬಲಿಯನ್ನೀಯಬೇಕು? "ಅತ್ತಿಲ್ಲ ಇತ್ತಿಲ್ಲ ಎತ್ತಹೋಗುವುದೆಂದು ಜೀವವತ್ತಿತ್ತ ನೋಡಿ, ಅತ್ತತ್ತು ಸುಮ್ಮನಾಗಿರುವ ಕೂಸಿನ ಹಾಗೆ ಸತ್ತಂತೆ ಬಿದ್ದು''ಕೊಂಡಿರಲು, ಇಲ್ಲವೆ ಭಾಸಹಾಸಗಳಲ್ಲಿ ಜೀವ ತೇಲುತ್ತಿರಲು, ಆವನ ನಾಮವು ಒಮ್ಮೆಲೆ ಸಿಡಿಲು ಸಿಡಿದಂತೆ ಬಂತು! ಅದು ''ಹೇಸಿಗೆಯ ಹೂವ ಮೂಸಿಡುವ ತುಂಬಿಗೆ ದೂರವಲ್ಲಿರುವ ನಂದನದ ಕಂಪುಬಡಿದಂತೆ'' ಮನಸ್ಸಿಗೆ ಆದರಿಂದ ಇದ್ದುದರಲ್ಲಿಯೇ ಸಮಾಧಾನವಾಯಿತು ಆದರೆ ಆ ನಂದನ ದರಸು ಬರುವವರೆಗೆ ಜೀವ ಸುಮ್ಮನೆ ಕೂಡುವದೇ?' ಆತನ ಸಲುವಾಗಿ

ಜೀವವು ಏನು ಬೇಕಾದರೂ ಮಾಡಲಿಕ್ಕೆ ಸಿದ್ಧವಾಗುವದು. ಗೊಲ್ಲತಿಯಾಗಿ ಬೀದಿಯಲಿ ಅಲೆದಾಡಿ ತಿರಿದು ಈಚಲ ಚಾಪೆ ಹೆಣೆಯಬಹುದು; ನಾಡಾಡಿ ಡೊಂಬತಿಯಾಗಿ ಗಣಿಮಿಣಿಗಳನ್ನೇರಿ ಕುಣಿಯಬಹುದು; ತಿರಿಪೆಯ ಅನ್ನವಿದ್ದರೂ, ಹರಕು ಅರಿವೆ ಬಂದರೂ ಆ ಓರಗೆಯ ಮೈಯೊಡನೆ ತಿರುಗಬೇಕೆಂದು ಆಶಿಸುತ್ತದೆ. ಆತನ ಬರುವನ್ನು ಕಾಯುತ್ತ ಅವೆಷ್ಟೋ ಹಗಲಿರುಳುಗಳನ್ನು ಕಳೆಯಬೇಕಾಗುತ್ತದೆ; ಮರೆತು ನಿದ್ದೆ ಹೋದಾಗ ಆತ ಬಂದುಹೋದರೆ, ಕಳಕೊಳ್ಳುವೆನಲ್ಲ ಎಂಬ ಎದೆಗುದಿ. ಒಮ್ಮೆ ದಾರಿಕಾಯುತ್ತ ಕುಳಿತಾಗ, ಕಣ್ಣಿಗೆ ಜಂಪುಸುಳಿಯಿತೆಂದು ಗಳಿಗೆ ಅಲ್ಲೆ ಒರಗಿ, ಫಕ್ಕನೇ ಎಚ್ಚರಾಗಲು ಜೀವವು ಪಶ್ಚಾತ್ತಾಪ ಪಡುವದು; ಆ ನಿದ್ದೆಯ ಮೋಡಿಯನ್ನು ಬಗೆಯುವದು;—"ನಿದ್ದೆಯೆಂದರೆ ಪಂಚೇಂದ್ರಿಯಕೆ ಪಂಚತ್ವವೀವಂಥ ವಿದ್ಯೆ; ರಾಕ್ಷಸರು ಜಗಕೆ ಕಟ್ಟಿದ ರಕ್ಷೆ; ಕಣ್ಣುಕಟ್ಟು ಮಾಡುವ ಮೋಡಿ; ಕಲ್ಲುಮಾಡ ಜಡೆದಿಹ ಬೇಡಿ; ಅದು ಸಪ್ಪಗಿಹ ಸಾವು; ಮಾಗಿಯಲ್ಲಿ ಮಡಿಯೆ ಮಲಗಿದ್ದ ಹಾವು!" ಆದರೆ ಮುಂದೇನು? ಮುಂದೇನು? ಎಂಬುದೇ ಪ್ರಶ್ನೆಯಾಗಿ ನಿಲ್ಲುವದು. ಜೀವವು "ಮುಂದೇನೆ, ಸಖಿ ಮುಂದೇನೆ?" ಎಂದು ಕೇಳುವದು. ತನ್ನ ಹೊಟ್ಟೆಯೊಳಗಿನ ಸಂಕಟವನ್ನು ಕೇಳುವವರು ಸಿಕ್ಕರೆ ತೋಡಿಕೊಳ್ಳಬೇಕೆಂದು, ಜೀವವು ದುಃಖ ಭಾರದಿಂದ ಬಾಗಿರುವಾಗ "ಮುಂದೇನು?" ಪ್ರಶ್ನೆಯು ಮುಂದೆ ಬರುವದು "ಅಂತರಂಗದ ಸಭಾಮಂಟಪವನ್ನು ಕೆನ್ನೀರಿನಿಂದ ತಳಿಹೊಡೆದು ಗದ್ದಿಗೆ" ಮಾಡಿದರೂ ಅದನ್ನೇರಲಿಕ್ಕೆ ಪಟ್ಟದರಸು ಬರಬೇಕಲ್ಲವೇ? ಆತನೇನು ವಿರಾಗಿಯಂದದ ಭೃಂಗವೇ? ಹಾಗಿದ್ದರೆ, ಹೃದಯ ಪರಾಗದ ಕಂಪಿನ ಕರೆಯು ಸರಾಗವಾಗಿರಲು ಬೇರೆಯ ಕರೆ ಬೇಕೇ? "ಅವನ ಪಂಥವ ತೊಟ್ಟು ಬಳಗವೆಲ್ಲವ ಬಿಟ್ಟ"ರೇನು? ಅಂಗಲಾಚಿ ಒರೆದರೇನು, ಜೀವವ ಚಾಚಿ ಕರೆದರೇನು? ಬರನು ಕೂತಿತು ಧನಿ; ಕಣ್ಣೆಲ್ಲ ಕಂಬನಿ; ಕರಗಿದೆ. ಕರಣ ಕಳವಳಿಸಿದವು; ಹರಣ ತಳಮಳಸಿದವು. ಇನ್ನು "ಹೊಳಿಯೊಳು ಹೊತ್ತಾರೆ; ಧುಮುಕಿ ನಾ ಸತ್ತರೆ, ಹೊಂದೇನೇ?" ಎಂಬ ಉಪಾಯವೊಂದು ಉಳಿಯುವದು. ಆಗ ಆ ಕೊನೆಯ ಪ್ರಯೋಗದಲ್ಲಿ

"ಆ ಚೆಲ್ವಿನ ತಿರುಳಾದ ಕೃಷ್ಣನ ನೆರಳು ಬಂತು!" ಅದು "ಮಾರವ್ವಾ ಬೇಡ ಈ ನಡಿಗೆ; ಕಾರವ್ವ ಡಂಭ ಕಾರುತ ಕಡೆಗೆ; ಸೇರವ್ವಾ ನೀನು ಪ್ರಭುವಿನ ಅಡಿಗೆ; ಬಾಗವ್ವಾ ಅದಕೆ ಬಾಗವ್ವಾ" ಎಂದು ಉಸುರಿತು.

## ಪುರುಷಾರ್ಥ

ಇನ್ನು ಪುರುಷಾರ್ಥದ ದಾರಿ. ಅಲ್ಲಿಯೂ ಆತನ ಶಕ್ತಿಯು 'ತಾಯಿ' ಯಂತೆ ಬೆಂಬಳಿಸಬೇಕು. ಆ ತಾಯ ಶಕ್ತಿಗೆ "ತುಂಬಿ ನಿನ್ನಡಿ ದಾವರೆಗಾದೆ; ಜಂಭನೀನೆಕಾಯಿ" ಯೆಂದೂ, "ನಿನ್ನ ಕಣ್ಣು ಕಡೆ ಗೋಲಿಂದ ನನ್ನ ಹೃದಯ ಕಡೆಯೇ ತಾಯಿ, ಬೆಣ್ಣೆ ಮೇಲೆ ತೇಲಿಸಿ ತಂದು, ನಿನ್ನ ಬಾಯ್ಗೆ ಹಿಡಿ"ಯೆಂದೂ ಪ್ರಾರ್ಥಿಸಿ ಮುನ್ನಡೆಯಬೇಕಾ ಗುವದು. ಆಗ 'ಸಪ್ಪೆ ಬಾಳುವೆಗಿಂತ ಉಪ್ಪುನೀರೂ ಲೇಸೆಂ' ದು ತೋರುವದು. "ಬಾಳಿನ ಬೆಂಕಿಗೆ ಮೈಬೆಂದು ಮನನೊಂದು ಬಲುಮೆಯ ಒಲುಮೆಯ ಕುಲುಮೆಯಲ್ಲಿ ತಾಳಿಕೆ ಬರುವಂಥ ಉಕ್ಕಾಗ" ತೊಡ ಗುವದು, ಮುಕ್ಕಾದ ಮೊನೆಯಾಗ ಮಸೆಯತೊಡಗುವದು. "ಜೀವ ದಾಸೆಗಳೆಲ್ಲ ಹೊಸೆದು ಹುರಿಗೊಳ್ಳುತ ಮನೋರಥವನ್ನು ಎಳೆಯುತ್ತಿರಲು, ಗರುಡನ ಹಕ್ಕಿಯು ಗರಿಗೆದರಿ ಹಾರಿ, ಬಾನಲ್ಲಿ ಬರಿ ಹಾಲು ಕರೆಯು ವುದು" ಅರಿದೇ? "ಗಿಡಮರದ ತೂಗಾಟ, ಹಸುಹಕ್ಕಿ ಕೂಗಾಟ ಚಿನ್ನಾಟ–ನನ್ನಾಟ ಒಂದಾದವು" ಎನ್ನುವಷ್ಟು ಸಮರಸಭಾವವು ಜಾಗ್ರತವಾಗುವದು. ಗಾಳಿಯ ಹಾರಾಟ ಏರಾಟ ಚೀರಾಟ ಭೋರಾಟ ಗಳೂ, ಕುಣಿದಾಟ ತುಳಿದಾಟಗಳೂ, ಎಳೆದಾಟ ತೂರಾಟಗಳೂ, ಎಲೆಗಳ ಕಳೆವಾಟವೂ, ಸುಟ್ಟುರೆಗಾಳಿಯ ಹುಡಿಯಾಟವೂ ಛಂದೋ ಗತಿಯ ಚೆಂದವನ್ನೂ, ತಾಳಲಯದಾನಂದವನ್ನೂ, ಸ್ವಚ್ಛಂದ ಬಂಧ ವನ್ನೂ ಕಲಿ"ಸುವವು. ನೆರೆಹೊರೆಯಲ್ಲಿ ಹಾವುಗಳ ಅರಮನೆಯಿದ್ದ ರೇನು, ಹೂವಿನ ತವರ್ಮನೆಯಿದ್ದರೇನು? ನರಿ ನಾಯಿ ಇದಿರಾಗಿ ವಾದಿಸಿ ಬೆಚ್ಚಿಸಿದರೂ ಎಚ್ಚರಿಸಿ ನಿದ್ದೆಗೆ ನೆರವಾಗುವವು. "ಎಲ್ಲಿಂದೊ ಬಂದ ಒಂದು ಸೌಂದರ್ಯಝರಿಯಿಂದ ಎದೆಎದೆಗು ಕಾರಂಜಿ ಪುಟಿಯುತಿದೆ; ಯಾರಿಂದೊ ಚಲಿಸುವ ಪ್ರಾಣದ ಸೂತ್ರವು ಪುರುಷಪ್ರಕೃತಿಗಳನು

ಕುಣಿಸುತಿದೆ; ಘನರಸ ಆನಂದ; ಆನಂದದ್ರವರಸ ಯಾವುದೊ ಕಾವಿಗೆ ಆಗುತಿದೆ"ಯೆಂಬುದು ಕವಿಯ ಅನುಭವವೇ ಆಧಾರವಾಗಿರಲು ಬೇರೆ ಮಾತು ಏಕೆ? "ಪ್ರತಿಭೆಯ ಗರ್ಭದ ವಿಶ್ವಕರ್ಮನ ಕರೆಸಿ ಗಾಳಿ ಗೋಪುರ ಕಟ್ಟುವುದೂ, ವಾಗಿಂದ್ರಜಾಲದ ಮಾಲೆಮಾಲೆಯ ಬೀಸಿ ಸಪ್ತಸ್ವರ್ಗದ ಶಿಖರ ಮುಟ್ಟುವುದೂ" ಇಂಥ ಪ್ರಸಂಗದಲ್ಲಿಯೇ. "ಹರಿದರು ನೆತ್ತರು ಉಳ್ಳವರು ಸತ್ತರು, ಒಳ್ಳೆವರು ಅತ್ತರು ಕುಣಿ ಯೋಣು ಬಾ'' ಎಂದು ಜೀವನದ ಜೊತೆಗಾರ್ತಿಗೆ ಕರೆಯುವುದೂ ಇದೇ ಮಂಗಲಮುಹೂರ್ತದಲ್ಲಿಯೇ.

ಈಗ, ಇಲ್ಲಿ ಏನು ಪುರುಷಾರ್ಥ ಕಂಡುಬಂದಿತೆಂದು ಕೇಳ ಬಹುದು. ಕವಿಜೀವನದ ಹಿಗ್ಗಿನ ಹೊನಲು ಅನ್ನ-ಹಸಿವುಗಳನ್ನು ಎಲ್ಲಿಯೋ ಮುಳುಗಿಸಿಬಿಟ್ಟಿದೆ. ಅನ್ನ-ಹಸಿವೆಗಳಿಗೇ ಅರ್ಥ, ಕಾಮ ಎಂಬ ದೊಡ್ಡ ಹೆಸರುಗಳಿವೆಯಂತೆ; ಅಲ್ಲದೆ ಅನ್ನ–ಹಸಿವುಗಳ ತೊಡ ಕನ್ನು ತೊಡಕಿಲ್ಲದೆ ಬಿಡಿಸುವ ಪ್ರಯೋಗವೇ ಧರ್ಮವಂತೆ. ಆದರೆ ಆ ಧರ್ಮಶಕ್ತಿಯು ಲಭಿಸುವದೆಂತು? ಅದಿರುವದೆಲ್ಲಿ? ಆ ಧರ್ಮಶಕ್ತಿಯು ಹಸಿವು, ಅನ್ನಗಳ ತೊಡಕಿನಲ್ಲಿ ಸಿಗದಂತೆ ಮೀರಿನಿಂತ ಜ್ಞಾನದಲ್ಲಿದೆ ಯೆಂದೂ, ಆ ಜ್ಞಾನವು ಎಷ್ಟು ಪೂರ್ಣವೋ ಅಷ್ಟು ಆ ಧರ್ಮವು ಪೂರ್ಣ, ಅಷ್ಟೇ ಹಸಿವು–ಅನ್ನಗಳ ಸಮಸ್ಯೆಯಲ್ಲಿ ತೃಪ್ತಿಯೆಂದೂ, ಆ ಮಾನ ದಿಂದಲೇ ಮಾನವನು ಮುಕ್ತನೆಂದೂ ಕವಿಯ ವಿಚಾರಗಳಿವೆ. ಆ ಜ್ಞಾನ, ಆ ಸಮತೂಕ, ಒಂದನ್ನೊಂದು ನುಂಗುವ ಆ ಎರಡು ಶಕ್ತಿ ಗಳು ಈ ನಾಲ್ಕಕ್ಕೇ ಪುರುಷಾರ್ಥವೆಂದು ಹೇಳುವರಾದರೆ, ಕವಿಗೆ ಆ ಪ್ರಸಂಗದಲ್ಲಿ ಅವು ಅನುಕೂಲವಾಗಿದ್ದವೆಂದು ಕಂಡುಬರುವದರಿಂದ ಅದು ಪುರುಷಾರ್ಥವೇ ಸರಿ.

•

## ಪುರುಷೋತ್ತಮನೊಡನೆ

ಪುರುಷಾರ್ಥವು ಪುರುಷನ ಲೀಲೆ. ಶರೀರ–ಪ್ರಾಣ–ಮನಗಳೆಂಬ ಕೆಳಗಿನ ಪ್ರಕೃತಿಗಳನ್ನು ಈಲುಮಾಡಿಕೊಳ್ಳುವ ಹೋರಾಟ. ಆ ಅಂಕು ಮುಗಿದ ಮೇಲೆ ಪರದೆ ಇಳಿಯಬೇಕಷ್ಟೇ? ಯಾಕೆಂದರೆ ಆಗ

''ಜೀವನವೆ ಹೊಗೆಯಾಗಿ ಉಗಿಯಾಗಿ ಇಬ್ಬನಿಯಾಗಿ ಮಂಜಾಗ ಮಸಕಾಗಿ ಹೋಗುತಿದೆ." ಪರದೆ ಬಿದ್ದುದರಿಂದ, ಕಾಣಿಸುತ್ತಿದ್ದ ಆ ಗುಡಿ ಹುಡಿಗೂಡಿ ಹೋಯ್ತು; ಆ ಗಾಳಿಗೋಪುರವು ಗಾಳಿಗೂಡಿತು. ಅದೆಲ್ಲವೂ ಸುಡುಗಾಡಸಿದ್ಧರಾಟದಂತೆ ಗಾಳಿಗೆಗಾಳಿ, ಬಯಲಿಗೆ ಬಯಲು ಆಗಿ ಬಿಟ್ಟಿತು. ಕೃತಯುಗವೇ ಬಂತೇನೋ ಎಂದು ಕುಣಿಯುತ್ತಿರುವಾಗಲೇ ಕಾಳರಾತ್ರಿ ಬಂದು ಆವರಿಸಿತು. ಹಗಲನ್ನು ಇರುಳು ಹೊಡೆಯಿಸಿತು. "ದೈವದ ನಿಕಷಕೆ ಪೌರುಷವಿಳಿಯದೆ ನಿಂತಂಥ ನೆಲವೆಲ್ಲ ನೀರಾಯಿತೋ?" ಎಂದು ಕವಿಯು ಕಂಗೆಟ್ಟಿದ್ದಾನೆ. ''ಹೆಣದ ತಂಗ್ಯೆ ಬಂದು ಮುಂಗ್ಯೆ ಹಿಡಿದಂತೆ ಹೆಂಡತಿಯ ಮಾತಿನ ಪಟ್ಟು ಮನಸ್ಸಿಗೆ; ಪ್ರೇತದ ತಕ್ಕೆಯಲ್ಲಿ ಸಿಕ್ಕ ಪ್ರೀತಿಯ ಹಾಗೆ" ತೋರತೊಡಗಿತು. ಆದುದರಿಂದ ಮನೆಯು ಮೇಳವಿಸದೆ ಹೋಗಲು "ನನ್ನ ತಾಯಿಯ ನೆನೆದು ನಾ ಸುಮ್ಮನಾದೆನು. ಒಳಗೊಂದು ಹೊರಗೊಂದು ಜೀವಿಸಿದೆ'' ಯೆಂದು ಹೇಳಿಕೊಂಡಿದ್ದಾರೆ. ಹೀಗೆ ಒಂದಲ್ಲ ಎರಡು ವರುಷಗಳು ಕಳೆದವು. ಎದೆಯನ್ನಿರಿದಾಡಿ, ಮಿದುಳನ್ನು ಅರೆದಾಡಿ, ಜೀವನವನ್ನು ನೊರೆದಾಡಿ ಆ ನೆಲೆನಿಂತ ದೈವವೊಮ್ಮೊ ಹೇಗೋ ತಪ್ಪಿತು! "ಮುಂದೇನು? ಏನುವಾಗ ಮುಂದೊಂದು ಕೈಬಂತು." ಅದು ದೈವದ ಕೈಯೆಂದೇ ತಿಳಿಯಲಾಯಿತು. "ಕತ್ತಲೆಯ ಗರ್ಭದ ತೇಜದ ಕಳೆಯೊಂದು ದಿನತುಂಬಿ ಪಡೆದಂತೆ, ಆ ಬೆಳಕು ಮುಂದಿನ ಹಗಲಿನ ಮುಂಬೆಳಕಾದಂತೆ ಅರಳು ಮೊಗ್ಗೆಯ ಅಂದವಲಿ ನಿಂತಿತು.'' ಆ ಬೆಳಕು ಯಾವುದು?— ಪ್ರೇಮೋದಯ. "ಪಾಕಹೊಂದಿದ ಪ್ರಕೃತಿ ಪ್ರೇಮದಿ ಪರಿಣಮಿಸಿ ಜೀವನ ದೇವನ ಮಾಡುವುದು. ಎದೆಯೊಲವು ಕಲಿಕೆಯ ಮಾತಲ್ಲ; ವಾದದ ಫಲ್ಲವಲ್ಲ; ಅದೃಷ್ಟವಶವಲ್ಲ.'' ಅನ್ನಕ್ಕೆ ಬಾಳಾಗಿ, ಕಾಮಕ್ಕೆ ಹೋಳಾಗಿ, ಮಾನಕ್ಕೆ ಆಳಾಗಿ ಉಸಿರೆಳೆದದ್ದು ಬಾಳಲ್ಲ; ಬದುಕಲ್ಲ. ಜೀವ ಜೀವಕೆ ಉದ್ದೀಪನವಾದುದೇ ಜೀವನವು. ಎದೆಯೇ ಅದರ ನೆಲೆ; ಬೆಳಕಿನ ಬದಿ.— ರಸಗಂಗಾನದಿಯೇ ಅದರ ಉಗಮ. ಅದರ ಹೆಸರು ಪ್ರೀತಿ; ಹಿಗ್ಗಿನ ರೀತಿ, ಆತ್ಮದ ನೀತಿ. "ಕಲ್ಯಾಣ ಶಕ್ತಿಯ ಕೈಯ ಕುಶಲತೆಯಿಂದ ಪಾಕವಾಗಲಿ ಪ್ರೇಮ" ವೆನ್ನುವ ಕವಿಯು, ಈ

ಪೂರ್ವಾನುರಾಗದಂತೆ ಉತ್ತರಾನುರಾಗವು ಪ್ರಕಟಗೊಂಡಾಗಲೇ ನಮಗೆ ತಿಳಿಯುವುದು. ಆದರೆ, ಆ ಜೀವವು ತನಗೆ "ಪ್ರೀತಿಯ ಪ್ರಸಾದವು ದೊರೆತು ಜೀವಿತಕ್ಕೆ ಧನ್ಯತೆಯ ಮುದ್ರೆ ಬೀಳಲೆಂ"ದು ಹಂಬಲಿಸಿದೆ; ಹಂಬಲವು ಆರಿದ ಲಕ್ಷಣವಲ್ಲ; ಕಾದ ಎಂಜಿನು, ಅಲ್ಲಿಗೇ ನಿಲ್ಲದು; ಇದು ಸ್ಪಷ್ಟ. ಕವಿಯು ಈ ನಿಲವಿಗೆ ಬರುವುದಕ್ಕೆ ಸಖಿಯು ಸಂಗಾತಿಯಾಗಿದ್ದಾಳೆಂಬ ಮಾತನ್ನು ಮರೆತರಾಗದು.

ಈ ಮುಂದಿನ ಬಾಳಿನ ಅನುಭವ ನಮಗೆ ಹೇಳಲಿಕ್ಕಾಗದು; ಆದರೆ, ಅಲ್ಲಿನ ರೀತಿ-ನೀತಿಗಳನ್ನೂ, ಗುಣ-ಸ್ವಭಾವಗಳನ್ನೂ ತುಸು ಮಟ್ಟಿಗೆ ಅರಿತುಕೊಳ್ಳಬಹುದು. ಅದು ಶಾಸ್ತ್ರದ ಮಾತು. ಆ ದಾರಿಯಲ್ಲಿ ಪ್ರವಾಸ ಮಾಡುವ ಮೊದಲು ಕೈಪಿಡಿಯನ್ನು ನೋಡಿ ಇಟ್ಟಿರುವಂತೆ, ಕವಿಯು ಆ ಬಗೆಗೆ ಹೇಳಿದ ವಿಚಾರಗಳನ್ನು ತಿಳಿಯಬೇಕು.

ಪ್ರೇಮಪರಿಪಾಕಗೊಳ್ಳಲು ಹೊಂದುಗೂಡಿಕೆಯೇ ಮುಂದಿನ ದಾರಿ. ಅದಕ್ಕೂ ಮೊದಲು ಹೊಂದುಗೂಡಿರುವ ಬುದ್ಧಿಯು ಕೆಲವು ಕಡೆ ಕಡಿಮೆ ಇರುತ್ತದೆ; ಹಲವು ಕಡೆ ಇರುವುದೇ ಇಲ್ಲ. ಅದು ಕಡಿಮೆಯಾದಂತೆ ಹಾಳಾಗುವ ಹಾದಿ ಸಮೀಪಿಸಿತೆಂದು ತಿಳಿಯಬೇಕು; ಎಂಥ ಬಡಿದಾಟಕಡಿದಾಟಗಳಲ್ಲಿಯೂ, ಅದಲುಬದಲಿನಲ್ಲಿಯೂ ಹೊಂದುಗೂಡಿ ಒಂದಾಗಿರಬೇಕೆಂಬ ಬುದ್ಧಿಯೊಂದು ಮಾತ್ರ ನೆಲೆಗೊಂಡಿದ್ದರೆ ನಮ್ಮ ಧರ್ಮವೂ ಉಳಿಯುವದು; ನಾವೂ ಉಳಿಯುವೆವು. ಅದೇ ಧರ್ಮದ ಮರ್ಮ. "ಹೊಂದುಗೂಡಿರುವಂತೆ ಅನುಕೂಲಿಸಿ ಕೊಡುವವರೇ ಧರ್ಮಸಂರಕ್ಷಕರು. ಹೊಂದುಗೂಡಿಸುವವರೇ ಧರ್ಮವಂತರು; ಹೊಂದುಗೂಡಿಕೆಯ ಹಾದಿಯೇ ಧರ್ಮದ ಹಾದಿ; ಬಲದ ಹಾದಿ; ಜಯದ ಹಾದಿ; ಶುಭಮಂಗಳದ ಹಾದಿ; ಶಾಂತಿ ಪುಷ್ಟಿತುಷ್ಟಿಗಳ ಹಾದಿ." ನಮ್ಮ ಕವಿ ಆ ಹಾದಿಯ ಆರಂಭದವರೆಗೆ ಬಂದು ನಿಂತುದನ್ನಂತೂ ನಾವೀಗ ಅರಿತೆವಷ್ಟೇ ?

---

# ೪ ಮಹಾ ಜೀವನದಾಹ

## ನಲ್ಲೆಯು ಎಲ್ಲೆ

ಜಾತಿ, ಮತ, ಕುಲಗಳ ಸಂಕುಚಿತ ಬುದ್ಧಿಯನ್ನು ಮೀರಿರುವುದೇ ಧರ್ಮ. ಧರ್ಮವು ಅನುಭವದ ಮಾತು; ಮತವು ಬುದ್ಧಿಯದು. ಒಂದು ತನ್ನನ್ನೇ ತಾನರಿಯಲು ತಪ ಮಾಡುವದು; ಇನ್ನೊಂದು ಬೇರೆಯವರ ಬುದ್ಧಿಯನ್ನು ಬದಲು ಮಾಡಲು ತಿಣಿಕಾಡುವದು, ಮತವು ಸಾಧನೆ; ಧರ್ಮವು ಸಿದ್ಧಿ. ಮತದಲ್ಲಿ ಮನುಷ್ಯನು ಹುಟ್ಟಬಹುದು; ಧರ್ಮವನ್ನು ಅವನು ಪಡೆಯಬೇಕಾಗುತ್ತದೆ. ಹಾಗಾದರೆ ಅವನು ಪಡೆಯ ಬೇಕಾದ ಧರ್ಮ ಯಾವುದು ? “ ಒಳ್ಳೆಯ ಮನಸ್ಸಿನಿಂದ ಹೊಂದುಗೂಡಿರುವ ಧರ್ಮ ವನ್ನು; ವೈಮನಸ್ಸಿನಿಂದ ಬೇರೆ ಬೇರೆಯಾಗುವ ಅಧರ್ಮವನ್ನಲ್ಲ.” ಈ ಧರ್ಮದ ಗ್ಲಾನಿಯಾದಾಗಲೇ ಅವತಾರಿಗಳು ಅವತರಿಸುತ್ತಾರೆ. ರಾಮ-ಕೃಷ್ಣರು ಹೊಂದಿಕೆಗೆಡಿಸುವ ದುಷ್ಟರನ್ನು ನಿಗ್ರಹಿಸಿ, ಹೊಂದಿಗೂಡಿರುವ ಶಿಷ್ಟರನ್ನು ರಕ್ಷಿಸಿದರು; ಶಂಕರಾಚಾರ್ಯರು ಹೊಂದುಗೂಡಿಕೆಯ ಹಾದಿಯಿಂದ ಆರುಮತಗಳನ್ನು ಸಂಧಿಸಿದರು; ಹದಿನೆಂಟು ಜಾತಿಯವರಿಗೂ ಹೊಂದುಗೂಡಿ ಬಾಳುವೆ ಮಾಡಹಚ್ಚಿದರು ಬಸವಣ್ಣನವರು. ವಿದ್ಯಾರಣ್ಯರೂ, ರಾಮದಾಸರೂ ಇದೇ ಕೆಲಸವನ್ನು ಮಾಡಿ ಹೋದರು. ಅವತಾರಿಗಳಿಗೂ ವಿಭೂತಿಗಳಿಗೂ ಸಮಾಜ-ರಾಷ್ಟ್ರಗಳು ಕರ್ಮಕ್ಷೇತ್ರ ವಾಗುತ್ತವೆ; ಯಾಕಂದರೆ ಅವರ ಕೃಷಿದೊಡ್ಡದು. ಸಾಮಾನ್ಯಜೀವಿಗಳು ಸಹ ಒಂದು ಚಿಕ್ಕ ಕೃಷಿಯನ್ನು ಮಾಡಿಕೊಳ್ಳಲೆಬೇಕಾಗುತ್ತದೆ. ಅದು ಹೊಂದುಗೂಡಿಕೆಯ ಧರ್ಮಕೃಷಿ. ಕುರಿಹಿಂಡಿನ ಹೊಂದುಗೂಡಿಕೆಯೂ ಅಲ್ಲ; ಹೊರೆಯೊಳಗಿನ ಕಟ್ಟಿಗೆಯ ಒಂದುಗೂಡಿಕೆಯೂ ಅಲ್ಲ. ಒಳ್ಳೆಯ ಮನಸ್ಸಿನಿಂದ ಅಂದರೆ ತಿಳಿದು, ಶಕ್ತಿಪೂರ್ವಕವಾಗಿ, ಯಾರ ಪ್ರೇರಣೆಯಿಲ್ಲದೆ ಹೊಂದುಗೂಡುವುದು ಧರ್ಮ; ಹೊಂದುಗೂಡುವುದಕ್ಕಾಗಿ ಬಡಿದಾಡಿದರೂ ಧರ್ಮವೇ ! ಪ್ರತಿ ಒಂದು ಮನೆಯೇ ಆ ಧರ್ಮಾಲಯ. ಗಂಡನಿಗೆ ಹೆಂಡತಿಯೂ, ಹೆಂಡತಿಗೆ ಗಂಡನೂ ಪ್ರಯೋಗ ಜೀವಿ. “ ಒಕ್ಕಾಲು

ಕಸ್ತೂರಿ, ಮುಕ್ಕಾಲು ಮಣ್ಣು" ಕೂಡಿದ ಆ ಕಾಮುಕಸ್ತೂರಿಯ ವಾಸನೆಗೆ ಮೋಹಿತರಾಗಿ ಗಂಡು–ಹೆಣ್ಣು ಹೊಂದುಗೂಡಲು ಸ್ವಾಭಾವಿಕವಾಗಿಯೇ ಪರಸ್ಪರರು ಎಳೆಯಲ್ಪಡುತ್ತಾರೆ. ಆದರೆ ಆ ಎಳತವು ಕಾಮದ ಮೂರ್ಛೆ ಯಿರುವವರೆಗೆ ಮಾತ್ರ ಉಳಿಯುವದರಿಂದ ಅದು ಜ್ಞಾನಪೂರಿತ ಹೊಂದುಗೂಡಿಕೆಯಲ್ಲ. ನಿಗಿನಿಗಿ ಕೆಂಡ ಸಿದ್ಧಗೊಳಿಸಲು ಇದ್ದಲಿ ಯನ್ನು ಉಪಯೋಗಿಸುವಂತೆ, ಜ್ಞಾನಪೂರಿತ ಹೊಂದುಗೂಡಿಕೆಯನ್ನು ಪಡೆಯುವದಕ್ಕಾಗಿ, ಆ ಕಾಮಪ್ರೇರಿತ ಮೋಹಾಕರ್ಷಣವನ್ನು ಏಕೆ ಉಪಯೋಗಿಸಬಾರದು? ಜಗತ್ತಿನೊಡನೆ ಹೊಂದುಗೂಡಿಕೊಂಡಿರುವ ಧರ್ಮಾಭ್ಯಾಸಕ್ಕೆ ನಲ್ಲೆಯು ಆರಂಭದ ಬಿಂದು. ಆದೇ ನಲ್ಲೆಯ ಎಲ್ಲೆ. ಆದರೆ ಅದಕ್ಕೂ ಮೊದಲು?

## ಪೋರಿಪಾರ

ನಮ್ಮಲ್ಲಿ ಮದುವೆ ಆಗುವವರೆಗೆ ಪಾರಾಪೋರಿಗಳೇ. "ನಮ್ಮಲ್ಲಿ ಕಾಮನು ಅನಾದಿಕಾಲದಿಂದ ಅನಂಗನಾಗಿರುವದರಿಂದ ರತಿಯ ವಿಲಾಪಾಶ್ರುಗಳಿಂದಲೇ ಪ್ರೇಮವಲ್ಲರಿಯು ಕಮರಬೇಕು; ಇಲ್ಲವೆ ದೈವ ಕೃಪೆಯಿಂದ ಚಿಗುರಬೇಕು. ಅಥವಾ ಪತಿಯೊಲವಿಗೆ ಪಣತೊಟ್ಟ ಸತಿಯ ಪ್ರಣಯ ಸಾಹಸವೆಲ್ಲ ತಪದ ವೈರಾಗ್ಯವಿಲಾಸವಾಗಿ, ಬೂದಿಯೊಳ ಗಿಂದಲೇ ಅಡಗಿದ ಬೆಂಕಿಯೆದ್ದಂತೆ ಕೊನೆಗೆ ಏಳಬೇಕು. ಪಾಶ್ಚಾತ್ಯರ ಸರಸವು ವಿರಸದ ಪ್ರಸ್ತಾವನೆ; ನಮ್ಮ ರಸವೇ ನೀರಸ" ಇರಲಿ. ನಮ್ಮ ಮದುವೆಯ ಆರಂಭಬಿಂದುವನ್ನಿಷ್ಟು ನೋಡಿದರೆ ಕಂಡು ಬರುವುದೇನು? "ಪೋರಿ ನೀನು, ನಾನು ಪೋರ. ಮಾರಿಕಣ್ಣಿಗೆ ಮರುಳರಾಗಿ ನೆಚ್ಚಿ ಮೆಚ್ಚಿ ಕೂಡಿದ್ದೇವೆ. ಬೇರೆ ಇಲ್ಲ; ಇದ್ದರೆ ಶಿವನೇ ಬಲ್ಲ." ಎಂದು ಪೋರನು ವಿಚಾರಿಸಿದಾಗ ಕಣ್ಣಿಡುಬರುತ್ತದೆ. ಮಾವಿನ ಬಿರಸು ಗೊರಟೆಯೊಳಗಿಂದ ಅಗಿಯು ಹೊರಬರುವಂತೆ, ಆ ಪಾರ ಪೋರಿಗಳ ನಡುವೆ ಒಂದು ಎಳೆಯ ಒಲವು ಬಯಲಿಗೆ ಬಂದು ನಿಂತು, ಮುಗಿಲು ಮುಟ್ಟುವೆನೆಂದು ಕುಣಿಯ ಹತ್ತುತ್ತದೆ; ಆದರೆ ಅದಕ್ಕೆ ಕುತ್ತುಗಳೆಷ್ಟು? ಅಸಂಖ್ಯ; ಅಸಂಖ್ಯ ಪ್ರಕಾರದವು. ಅವಿಲ್ಲದಾಗ ಅವುಗಳ ನಯವೇನು? ಬಣ್ಣವೇನು?

ಸಿಂಗಾರವೇನು ? ಹೇಳಿ ತೀರದು. ಕುಂದುಕೊರತೆಗಳೊಂದೂ ಕಾಣವು. ಅಂತೆಯೆ ಆ ನಲ್ಲೆ ಹೀಗೆ ಹೇಳಿಕೊಳ್ಳುತ್ತಾಳೆ— "ನಾನು ಬಡವಿ, ಆತ ಬಡವ. ಒಲವೆ ನಮ್ಮ ಬದಕು; ಬಳಸಿಕೊಂಡೆವದನೆ ನಾವು ಅದಕು, ಇದಕು, ಎದಕು," "ಹತ್ತಿರಿರಲಿ, ದೂರವಿರಲಿ ಅವನೇ ರಂಗಸಾಲೆ; ಕಣ್ಣುಕಟ್ಟುವ ಮೂರ್ತಿಯೂ ಕಿವಿಗೆ ಮೆಚ್ಚಿನೋಲೆಯೂ ಅವನೇ. ಅವನು ಯಾವ ಋತುವಿನಲ್ಲಿ ಮುಟ್ಟಿದರೂ ಮೈತುಂಬ ನವಿರು ಬಟ್ಟೆ; ನನಗೆ ಕೊಟ್ಟ ವಸ್ತ್ರವೊಡವೆ ಅವನಿಗೇ ಗೊತ್ತು; ತೋಳುಗಳಿಗೆ ತೋಳ ಬಂದಿ; ಕೆನ್ನೆತುಂಬ ಮುತ್ತು ಇವೇ ನನಗೆ ಗೊತ್ತಿರುವ ಒಡವೆಗಳು. ತುಟಿಗೆ ಹಾಲುಜೇನು, ಹೊಟ್ಟೆಗೆ ಜೀವಫಲ ಇತ್ತಿದ್ದಾನೆ." ಇದೆಲ್ಲ ಒಲವಿನ ಬದುಕಿನಿಂದ ಕಟ್ಟಿದ ಬಾಳು. ಅದೇನು ಸವಿ! ಅದೆಷ್ಟು ಚೆಲುವು!

## ಎದೆಹಿಗ್ಗು ಕಡೆಮುಟ್ಟ

ಗಂಡುಗಾಡಿ ಬಲದಬೆಲೆ; ಹೆಣ್ಣು ಮೋಡಿ ನಲವಿನ ನೆಲೆ. ಬಲ್ಮೆಯಿಂದ ಪಾಲನೆ, ನಲ್ಮೆಯಿಂದ ಲಾಲನೆ; ಲಾಲನೆ-ಪಾಲನೆಗಳೆರಡೂ ಸಂಗಮವಾದಲ್ಲಿ ಬಾಳಿನ ಬೆಳಕು. "ಬಗೆಯು ಇಬ್ಬಗೆಯಲ್ಲಿ ಹುರಳ ತಿರುಳೊಂದು. ಕಣ್ಣೆರಡು ಕಾಣಿಕೆ ಎರಡೇ?" ಒಲವೇ ನಮ್ಮ ಬದಕು ಎಂದು ಹಾಡಿದ ಗೃಹಣಿಯನ್ನು ಕುರಿತು—"ಏಳು ಮೆಟ್ಟಿನ ಹುಲಿಯ ಬೀರ ಬೇಂಟೆಯ ಬಿಡಿಸಿ, ಮಗುವ ಮುದ್ದಾಡುವೊಲು ಮಾಡಿದಾಕೆ; ಗುರಿಯಿಟ್ಟ ಕಣ್ಣುಗಳ, ಕಿವಿಯೂದಿ, ಹೊರಳಿಸುತ ತಾನೆ ತನ್ನಷ್ಟಕ್ಕೆ ಹಾಡಿದಾಕೆ; ಮನೆಯ ಹೊಸ್ತಿಲಕೆ ಶುಭ ಬರೆಯುವಾಕೆ" ಎಂದು ಬಣ್ಣಿಸಬಹುದು. ಅದು ಬಣ್ಣನೆಯಲ್ಲ, ವಾಸ್ತವ. ಅಂಥ ಶಕ್ತಿಮತಿಯು, ಸಂಸಾರದಲ್ಲಿ ವಿರಸವಾದಾಗ ಅಳುವಳು. ಆಕೆ ಅತ್ತರೆ, ಈತನು ಎದೆಗೆಡುವನು; ಅಲ್ಲಿ ಕಣ್ಣೀರು ಸುರಿದರೆ, ಇಲ್ಲಿ ಕಾಲು ಕತ್ತರಿಸುವವು. "ಸಿಡಿಲ ಸೈರಿಸಲಹುದು; ಕಂಬನಿಯ ಸೈರಿಸಲಾಸಲ್ಲ. ಅದು ನಂಜುಂಡ ಶಿವನು ಸಹ ನುಂಗದಂಥ ನಂಜು. ಭವಭವಾಂತರದಲ್ಲಿ ತೊಳಲಾಡಿಸುತ್ತಿರುವ ಆ ಭವಾನಿಗೆ ಹಿಡಿದ ಹಗಲು ಪಂಜು." ಅದು ಮನೆಯಲ್ಲಿ ಕಾಣಿಸಬಾರದು; ಅದು ಕೇಡಿನ ಕುರುಹು. ಅದಕ್ಕಾಗಿಯೇ ಕವಿ—"ನನ್ನ ಕೈಯ್ಯ

ಹಿಡಿದಾಕೆ; ಅಳುನುಂಗಿ ನಗು ಒಮ್ಮೆ ನಾನೂನೂ ನಕ್ಕೇನು; ಇಲ್ಲದಿದ್ದರೆ ನಿನ್ನಳುವಿನ ಹುಚ್ಚು ಹಳ್ಳದ ಕಳ್ಳ ಹುದಲಲ್ಲಿ ಸಿಕ್ಕೇನು" ಎಂದು ಕಿವಿಯಲ್ಲಿ ಉಸುರಿದ್ದಾನೆ; ಆದರೆ ಅಳುವು ಸುಲಭವಾಗಿ ತೊಡೆಯುವದಿಲ್ಲ. ಒಳಗೆ, "ನಿದ್ದೆಯೆಚ್ಚರ ಬಿಟ್ಟ ಬೇರೆ ಬಾಳಿಹುದೇ? ಇಹುದಾದರೆ ಅದರಲ್ಲಿ ನಾ ಬದುಕ ಮಾಡಬಹುದೇ?" ಎಂದು ಗಾಳಿಗೋಪುರ ಕಟ್ಟುವ ಮನಸ್ಸು; ಮುಂದೆ ಅಳುತ್ತ ನಿಂತ ನಲ್ಲೆ. ಆದರೂ ಸಮಾಧಾನದಿಂದ ಹೇಳುವನು: "ಹುಸಿನಗುತ ಬಂದೇವ ನಸುನಗುತ ಬಾಳೋಣ, ತುಸು ನಗುತ ತೆರಳೋಣ; ಬಡನೂರು ವರುಷಾನ ಹರುಷಾದಿ ಕಳೆಯೋಣ, ಯಾಕಾರೆ ಕೆರಳೋಣ? ಬಡತನ ಒಡೆತನ ಕಡೆತನಕ ಉಳಿದಾವೇನ? ಎದೆ ಹಿಗ್ಗಿ ಕಡೆ ಮುಟ್ಟ! ಬಾಳಿನ ಕಡಲಾಗ ಅದನ ಮುಳಗಿಸ ಬ್ಯಾಡ ಕಡೆಗೋಲು ಹಿಡಿಹುಟ್ಟ" ಎಂದು ಬಾಳಿನಲ್ಲಿ ಜೊತೆಗೆ ಬೆಂಬತ್ತಲಿಕ್ಕೆ ಕರೆಯುತ್ತಾನೆ; ಗುರಿಯ ಕಡೆಗೆ ನೌಕೆ ನಡೆಯುವಂತೆ ಹುಟ್ಟು ಹಾಕಲಿಕ್ಕೆ ಹೇಳುತ್ತಾನೆ.

### ಕರುಕುಳಿನ ಕಕ್ಕುಲತೆ

ಆದರೆ ಅಳುವವರ ಬೇನೆ ಅಳುವವರಿಗೆ ಗೊತ್ತು. ಗಂಗೆಯ ನೋವು ಗೌರಿಯೇನು ಬಲ್ಲಳು! ಗಂಡನಿಗೆ ಬೇಕಾಗಿದೆ—ಹಳ್ಳದ ದಂಡೆಯಲ್ಲಿ ಮೊದಲು ಆಕೆಯನ್ನು ಕಂಡಾಗ ಇದ್ದ ನಗೆ! ಅದು 'ಮುಂಗಾರಿ ಕಣ ಸನ್ನಿಹಾಂಗ' ಇತ್ತು. ಆದರೆ ಈಗ ಆ ಕಣ್ಣಿನ ಬೆಳಕೂ, ಮುಖದ ತುಳುಕೂ ತುಟಿಯೊಳಗಿನ ಝುಳುಕೂ ಇರಲಿಲ್ಲ; ಅಂದನ ಉಡಿಗೆಯ ಮಾಟವಾಗಲಿ, ನಡಿಗೆಯ ಥಾಟವಾಗಲಿ, ಹುಡಿಗೆಯ ಹುಡುಗಾಟವಾಗಲಿ ಇಂದಿರಲಿಲ್ಲ. ಅದಕ್ಕೆ ಕಾರಣವೆಂದರೆ—ಬಡತನದ ಬಲಿಯಾಗ ಕರುಳಿನ ಕೊಲಿಯಾಗ ಬಾಳ್ವೆಯ ಒಲಿಮ್ಯಾಗ ಹಪ್ಪಳದಂತೆ ಸುಟ್ಟು ಹೋಗಿದೆ ಹೆಣ್ಣು! ಮುಪ್ಪು ಬೇಗ ಬರದೆ ಏನು? ಅಂಥ ಅವಸ್ಥೆಯಲ್ಲಿ ನಗಿಸಲು ಯತ್ನಿಸುವುದೂ ಅಳಿಸುವ ಉಪಾಯವೇ ಆಗುತ್ತದೆ. ಹೊಸದರಲ್ಲಿ ಹುಬ್ಬುಹಾರಿಸಿದರೆ ಹಬ್ಬ ಎನಿಸುವುದೂ ಕಣ್ಣೆವೆ ಎತ್ತಿದರ ಹುಣ್ಣೀವಿ ತೆರೆದಂತಾಗುವುದೂ, ತಂಬುಲದ ತುಟಿನಗಿ ಹೊಂಬಿಸಿಲಿನಂತೆನಿಸುವುದೂ ಅರಿದಲ್ಲ; ಆ ಕಾಲ ಜನುಮದ ಜಾತ್ರೆ! ಆದರೆ ಸಂಸಾರಸಾಗರದೊಳಗಿನ ಅಸಂಖ್ಯ ದುಃಖದ ಬಂಡೆಗಳಿಗೆ ಅವರ ನೌಕೆಯು ಬಡಿದಾಗ,

ಪೆಟ್ಟು ಬಹಳ ಹತ್ತುವುದೂ ನೋವು ಹೆಚ್ಚು ಆಗುವುದೂ ಅಬಲೆಯಾದ ಹೆಂಗಸಿಗೆ ಅಲ್ಲವೇ? ಆಗ ಆಕೆಯು ಕಕ್ಕಾವಿಕ್ಕಿಯಾದಾಗ ಆ ಸ್ಥಿತಿ ಕಂಡು ಕೆಚ್ಚಿನ ಗಂಡಸೂ ಭೀತಿಗೊಳ್ಳುವನು. "ಈ ಗದ್ದ, ಗಲ್ಲ, ಹಣೆ, ಕಣ್ಣು, ಮಾರೀಗೆ ಮಾರಿಯ ರೀತಿ! ಸಾವನs ತನ್ನ ಕೈಸವರಿತಲ್ಲಿ; ಬಂತೆನಗ ಇಲ್ಲದ ಭೀತಿ" ಎಂದುಕೊಳ್ಳಲಾಗಿದೆ; ಇಷ್ಟೇ ಅಲ್ಲ, "ದಿಗಿಲಾಗಿ ಅನ್ನ ತದ ಜೀವ—ನಿನ್ನ ಕಣ್ಣಾರಿ ಕಂಡು ಒಮ್ಮಿಗಲs! ಹುಣ್ಣಿವೀ ಚಂದಿರನ ಹೆಣಾ ಬಂತೊ ಮುಗಿಲಾಗ ತೇಲತ ಹಗಲು!"

## ಮನತುಂಬಿ ಮನೆತುಂಬಿ

"ಸಲ್ಲಿ-ಸಲ್ಲೆ ಕೂಡಿದಲ್ಲೆ ಹಿಗ್ಗಿಗುಂಟೆ ಮೇರೆ ಎಲ್ಲಿ?" ಎಂಬ ಮಾತು ಸತ್ಯ. ಹೆಣ್ಣೆಂದರೆ ಕವಿಗೆ ಪೂಜ್ಯವಸ್ತು; ಹೆಣ್ಣನ್ನು ತಾಯಾಗಿ ಕಾಣುವ ಗುರಿಯಿರಬೇಕೆಂದಿದ್ದಾರೆ ... "ಜಗಜ್ಜನನಿ! ಶರಣು ಬಂದೆನು ಶರಣ್ಯಳೇ! ಹೆಣ್ಣೆ; ಸೃಷ್ಟಿಯೇ! ಸಲಹುವೆ ಧರಿತ್ರಿಯಾಗಿ." ಹೀಗೆ, ವಿಶಾಲಭಾವನೆಯಿದ್ದಲ್ಲಿ ಮಾತ್ರ ಮನೆತುಂಬಿದ ಹೆಣ್ಣು ಮನ ತುಂಬಲಿಕ್ಕೆ ಬರಬೇಕಲ್ಲವೆ? ಆದರೆ ಬರುವ ಹೆಣ್ಣಿನ ಹೃದಯವೂ ವಿಶಾಲವಾಗಿರ ಬೇಕೆಂಬುದನ್ನು ನೆನಪಿಡತಕ್ಕದ್ದು. ಅದಿಲ್ಲದಲ್ಲಿ ಇಜ್ಜೋಡು ಬಾಳ್ವೆ. 'ಕಲ್ಲುಗೋಡೆಯು ಕೂಡ—"ಎಲ್ಲಿರುವೆ ರಾಜಗಂಭೀರಾ" ಎಂಬ ಆರ್ತ ಸ್ವರಕ್ಕೆ ಸೊಲ್ಲುಗೊಡುತ್ತಿರುವಾಗ ನಲ್ಲೆಯೆಂಬವಳು, ಕೈಹಿಡಿದಾಕೆಯು—ಹೀಗೆನಲು ಹಾಗೆಂದು, ಬೆಂದ ಹೆಣವನೆ ಕೊಂದು, ಭೂತಲೀಲೆಗೆ ತೊಡಗಿದರೆ ಗಂಡಸಿನ ಸೈರಣೆ ಎಷ್ಟು ಹೊತ್ತು ತಾಳೀತು! ಅವನು—"ಇದಿರಾಡದಿರು ಗೆಳತಿ, ನೀನು ಕೂಡ; ಹೃದಯವನು ರಣರಂಗ ಮಾಡಬೇಡ" ಎಂದು ಹಿತೋಕ್ತಿಯನ್ನು ಹೇಳುವನು. ಆದರೆ, ಆಕೆಯದು 'ನಾಗಲೋಕದ ರತ್ನರಾಶಿ ತರುವ ಪ್ರಯತ್ನ'! "ನಿನ್ನ ಮೈಸಿರಿ, ನನ್ನ ಐಸಿರಿ—ಹೀಗಿರಲು ಬಾಳುದ್ದ ಬದುಕಬಹುದು. ಇವೆಲ್ಲ ಹಿತೋಕ್ತಿ ಗಳು ಗಾಳಿಮಾತುಗಳೆಂದು ಉಸಿರನೆಳದಾಡಿದರೆ, ಪ್ರಾಣವೇ ಬರಿ ಗಾಳಿ ಯಾಗಲಹುದು." ಎಂದು ಎಚ್ಚರಿಸುವನು; ಮತ್ತು "ತೋಳ ತೊಟ್ಟಿಲ ಮಗುವು ಆಗಿ ಬಂದೆ; ಗೊಂಬೆ ಆಡಿಸಿದಂತೆ ಆಡಿಸೆಂ"ದು ಗಂಡು

ದರ್ಪವನ್ನು ಹರಿದು, ಬಿರುಸು–ಬಿಂಕವ ತೋರೆದು ಮೆಚ್ಚಿಸುವನು; "ಮಲಗಿರುವ ಹಾವನ್ನು ಕೆಣಕಬೇಡ; ಕಚ್ಚಿ ವಿಷ ಕಾರಿದರೆ ತಿಣಕಬೇಡ" ಎಂದು ಉಚ್ಚರಿಸುವನು. "ನಿನ್ನ ಕಣ್ಣೀರ್ಮುತ್ತು, ನನ್ನ ಕೊರಳಿನ ಸುತ್ತು ಆಭರಣವೆಂದು ಮೆರೆದಾಡುತಿರುವೆ; ಸ್ವರ್ಗನರಕಕ್ಕೆ ಕರೆದಲ್ಲಿ ಬರುವೆ. ಆದರೆ ಇದಿರಾಡದಿರು, ಮತ್ತೆ ಎದಿರಾಡದಿರು" ಎಂದು ಕೇಳುವನು. ಯಾಕಂದರೆ ಕವಿಗೆ ಹೊಂದುಗೂಡಿಕೆ ಬೇಕು; ಇನ್ನು ಮುಂದೆ ಹೊಸ ಹುಟ್ಟು ಬರಲಿದೆ; ಆ ಜಗದ ತಾಯಿತಂದೆ ಆಗೋಣವೆಂಬ ಹಿರಿಯಾಶೆ ಅವನಿಗೆ.

## ದಾಂಪತ್ಯದ ಇನ್ನೊಂದು ಮೆಟ್ಟು

ಅರ್ಧ ಉಪದೇಶ, ಅರ್ಧ ಬೆದರಿಕೆ ಇವುಗಳಿಂದಾಗಲಿ. ಒಂದಿಷ್ಟು ವಿಚಾರ ಒಂದಿಷ್ಟು ಧರ್ಮ ಅಥವಾ ಕರ್ತವ್ಯವೆಂದಾಗಲಿ ನಲ್ಲೆಯು ಒಲ್ಲೆನ್ನದೆ ಎಲ್ಲಮ್ಮನಂತೆ ಬೆಂಬಳಿಸಲನುವಾಗುವಳು. "ಜೀವಂತ ಭೂಮಿ" ಯಾದ ಜೊತೆಗಾತಿಯೊಡನೆ ಕಿವಿಮಾತಿನ ಸೊಗಸೂ, ಆಡಿದ್ದಾಡುವುದೂ, ಹಳೆಸದ ಮುದ್ದಾಟವೂ ಈಗುಳಿಯದು. ನುಸಿಸಿಗೂ ನವಿ ಬರುತ್ತಿದ್ದ ಕನಸಿಗೂ ಕಳೆ ಬರುತ್ತಿದ್ದ ಕಾಲವೊಂದಿತ್ತು. ಮುಗುವಿನ ನಗುವೂ, ಪರಸ್ಪರರಲ್ಲಿದ್ದ ನೆಚ್ಚೂ, ಬಾಳಿನ ಹುಚ್ಚೂ ಈಗ ಹಿಂದೆ ಸರಿದವು. "ನಿನ್ನೆಡೆ ಕರೆಯುವಿ ನೀ ನನ್ನ; ಮತ್ತೆ ನನ್ನ ಕನ್ನಡ ಕರೆವುದು ತನ್ನೆಡೆಗೆ; ಬೆನ್ನಾಟ ನನಗಿದು, ನಿನಗದು ಅಗಲಿಕೆ" ಎಂಬ ಮಾತಿನಲ್ಲಿ, ನೆಲಹಿಡಿದ ನಲ್ಲೆಯೂ ನೆಲೆಯೆದ್ದ ನಲ್ಲನೂ ಕಂಡು ಬರುವರು. ಪತ್ನಿಯು ಮತ್ತೇನೂ ವಿಚಾರ ಮಾಡದೆ, ಧ್ಯೇಯವಾದಿಯಾಗಿದ್ದರೆ ಪತಿಯ ಹೆಜ್ಜೆಯೊಡನೆ ಹೆಜ್ಜೆ ಹಾಕಬೇಕು. ಅಷ್ಟೇ. ಇನ್ನುಳಿದ ಸಂಸಾರವು ಹೇಗೇ ಇರಲೊಲ್ಲದೇಕೆ, ಕುಣಿಯಬಾರೆಂದು ಪತಿಯು ದೃವತವು ಕೈಮಾಡಿದ ಮೇಲೆ, ನಾರಿ ನೆರಳಿನಂತೆ ಹಿಂಬಾಲಿಸಲೇ ಬೇಕಷ್ಟೇ! ಕಣ್ ಒಳಗ ಹೊರಳಿಸಿ, ಎದೆ ಮುಗುಳ ನರಳಿಸಿ, ಹೂ ನೀರನುಳಿಸಿ" ಕುಣಿಯಲು ಆರಂಭಿಸಿದ್ದಾದರೆ, "ನಾನಲ್ಲ, ನೀನಲ್ಲ; ನನ್ನಲ್ಲಿ ನೀನಿಲ್ಲ, ಸಾವಿನ ನೋವಿಲ್ಲ! ಅದರಿಂದ ಇದ್ದದ್ದು ಮರೆಯುವದು; ಇಲ್ಲದ್ದು ತೆರೆಯುವದು; ಹಾಲು ಜೇನು ಸುರಿಯುವದು! ಕೋಲು ಬೇಡ, ಸಾಲು ಬೇಡ, ಕಲಿಕೆಯ ಕಾಲು ಬೇಡ, ಹಿಗ್ಗಿನಿಂದ

ನಡಿ; ಸಾಕು! ಅದರಂತೆ ತಾಳ ಬೇಡ, ತಂತಿ ಬೇಡ, ರಾಗದ ಚಿಂತೆ ಬೇಡ; ಹೆಜ್ಜೆ-ಗೆಜ್ಜೆಗಳೂ ಬೇಡ!" ನಾಚಿಕೆಯನ್ನು ಆಚೆಗೆ ಕಳೆದೊಗೆದು ಬೀಸಾಗಿ, ತರಗೆಲೆ ಜಿಗಿದಂತೆಯೂ, ಚಿಗುರೆಲೆ ಚಿಗಿತಂತೆಯೂ, ನನಿ ಕೊನೆ ಮುಗಿವಂತೆಯೂ ಕುಣಿಯಬೇಕಂತೆ! ಹೊಂಗೇದಗೆಯ ಹೊಡೆಯೂ, ಮಿಡಿನಾಗರ ಹೆಡೆಯೂ ತೂಗಾಡಬೇಕಂತೆ! ಚಿಗರೆಯಂತೆ, ತಿಗರಿಯಂತೆ ಸಿದ್ಧಿಯ ಭಗರಿಯಂತೆ, ಗಾಳಿಗೂ ಹಗುರಾಗಿ ಕುಣಿಯುವಾಗ ಕೈ ಮೈ ಬೀಸಾಡುವವು; ಇಳಿಗೂದಲು ಈಸಾಡುವವು; ಬೆವರಹನಿ ಸೂಸಾಡುವವು. ಅವನ್ನು ನೋಡಿ-"ಗುಡ್ಡ ತಲೆದೂಗಲಿ, ಹೊಳೆಹಳ್ಳ ನೂಗಲಿ, ದರಿಕೊಳ್ಳ ಕೂಗಲಿ" ಕುಣಿತವಿಲ್ಲದ ಜಗತ್ತೇ ಇಲ್ಲದಿರುವಾಗ, ಅದನ್ನುಳಿದು ಬೇರೊಂದು ಗತಿಯಿಲ್ಲವೆಂದು ಹೇಳಬೇಕೇ? ಈ ಜಗತ್ತು ದೇವನ ನರ್ತನ ಶಾಲೆ. ಜೀವಿಗಳೆಲ್ಲ ನರ್ತಿಸುವವರು; ಜಡವಸ್ತುಗಳೆಲ್ಲ ಹಾಗೆಯೇ ಮಾಡುವವು. ದೇವನು ಹಾಕಿದ ತಾಳದಂತೆ ಹೆಜ್ಜೆ ಹಾಕುವುದೇ ನಮ್ಮೆಲ್ಲರ, ಸಂಸಾರದ ಸಾರವಾದುದರಿಂದ, ಅಂಥ ಕುಣಿತದಿಂದ ಒಂದು ಸುಖವು ಮೊಳೆಯಲೆಂದೂ, ಅದು ಹದಿನಾಲ್ಕು ಲೋಕಕ್ಕೂ ಚಿಮ್ಮಲೆಂದೂ ಕವಿಯು ಹಾರಯಿಸುತ್ತಾನೆ.

## ಪ್ರೇಮ ಪರಿಪಾಕ

ಈ ಕುಣಿತದ ಮಾತಿರಲಿ ಕಾಮುಕಸ್ತೂರಿಯ ಕಂಪೂ ಸಹಜವಾದ ಮೇಲೆ, ಕಾವ್ಯಸಾಹಿತ್ಯಗಳಿಗಾಗಿ ಕನ್ನಡವು ಕವಿಯನ್ನು ಕರೆಯಹತ್ತಿತೆಂದೂ, ಸತಿ ತನ್ನೆಡೆಗೆ ಕರೆಯಹತ್ತಿದಳೆಂದೂ, ಹಿಂದೆ ಹೇಳಿಯಾಗಿದೆ. ಕವಿಗೆ ಆನಂದ ಕೊಡುವ ಹಳೆಮಾತು ಸವಿನುಡಿ ಇದ್ದವು. ಆದರೆ ಸತಿಗೆ ಪತಿ ಹಾಗೂ ಮಗು ಇಬ್ಬರೇ ಅಲ್ಲವೇ ರಂಜನೆಗೆ? ಅಷ್ಟರಲ್ಲಿ ಆಕೆಯ ಬಗೆಯೂ ಹೊಸದೊಂದು ಹಸಿವೆಗೆ ಬಾಯಿ ತೆರೆದಿತ್ತು; ಹಸುಮಗು ಹಾಲಿನ ರುಚಿ ಸಾಕೆನುವಂತೆ ಸಪ್ಪನೆಯ ಬದುಕಿಗೆ ಆಕೆ ಹೇಸಿದ್ದರು. ಆ ಇಬ್ಬಗೆಯಲ್ಲಿ "ನಗೆಯಾಟ ಹೊಗೆಯೇರಿ ನುಡಿಯಲ್ಲಿ ಕಿಡಿಹಾರಿ" ಆವರೆಡೆಗಳು ತಾನಾಗಿ ನಡುಗಹತ್ತಿದವು. ಅವರಿಗೆ "ಮಲೆನಾಡ ಸೆರಗಿನ ನೆರೆಗಿದ್ದ ಮನೆಯೊಂದು ಮಮತೆಯ ಕುರುಹಾಗಿ

ದೊರಕಿತ್ತು. ಅಲ್ಲಿ ಸಂಪಿಗೆಯಿತ್ತು; ಪಾರಿಜಾತಕವಿತ್ತು; ಮನೆಯೆದಿರು ಮಾವು ಮಲ್ಲಿಗೆಯಿತ್ತು; ಮುಗಿಲಮಲ್ಲಿಗೆಯಿತ್ತು, ತೆಂಗಿತ್ತು, ಹಲಸಿತ್ತು; ನಿಂಬಿಯ ಇಂಬಿತ್ತು; ಎಡಗಡೆಗೆ ಹೊಂಗೆಯ ಸಾಲಿತ್ತು; ಕಣ್ಮುಂದೆ ಕೆರೆಯಿತ್ತು; ಅದರಾಚೆಗೆ ಗುಡ್ಡದ ನೆರೆಯಿತ್ತು. ವೃಕ್ಷವಾಟಿಕೆಗಳಲಿ ಬಳ ಬಳಸಿ ಹೋಗುವ ಹಾದಿ ಬೀದಿಗಳುಂಟು; ನಾಲ್ಕೆಡೆಗೂ ತೋಪು ತೋಟಗಳುಂಟು, ಜೋಳದ ಹೊಲವುಂಟು; ಭತ್ತದ ಗದ್ದೆಯು ಬದಿಬದಿಗೂ ಬನದೇವಿಯೆಡೆಯಾಟಕೆಡೆಗೊಡುವ ಗುಡ್ಡಸಾಲಿನ ತೋಳುಂಟು; ಶಬರಿ ಪಾಮರಿಯರ ಸುಳಿದಾಟ ನಲಿದಾಟ ಸುಗ್ಗಿ ಸುಗ್ಗಿಗು ಉಂಟು." ಆ ಸೃಷ್ಟಿ ಸೌಂದರ್ಯದ ಕಡೆಗೆ ಕವಿಯ ಕಣ್ಣು ಹೊರಳಿದ್ದು ಸಹಜ. "ಬರ್ಚಿಗಾರರ ಬೀಡಾರ ಬಿಟ್ಟಂತೆ ಒಟ್ಟಿಲದಲಿ ಜೋಳದ ನಿಲವು. ಆಳೆತ್ತರವಾಗಿ ನಿಂತಿದೆ ಕಾಳಾಗಿ; ಬಯಲಿಗೆ ತಾನರಸನೆನ್ನುವೊಲು." ಹಾಗೂ "ಬಾಂದಳದ ಬೆಳ್ಳಿಗೆ ಭೂಮಿಯು ಬಂಗಾರ ಸಿಂಗಾರ ಮೊಗವೆತ್ತಿ ಮುದ್ದಿಟ್ಟಿತ್ತು." ಹಲವು ಚಿಕ್ಕೆಗಳು ಚಂದ್ರಿಕಾಜಲದಲ್ಲಿ ಮುಳುಗಿವೆ, ಕೆಲಚಿಕ್ಕೆ ಹಾಯಾಗಿ ತೇಲುತಿವೆ. ಮಲಗಿದ್ದ ಕಣ್ಣೆಲ್ಲ ಒಮ್ಮೆಲೇ ಎಚ್ಚತ್ತು ಆ ಚೆಲುವನ್ನು ಕಣ್ಣಾರೆ ಕುಡಿದರು ತೀರಲಾರದಷ್ಟಿದೆ. ಅಂಥ ಇರುಳಿನ ಹಡಗಿನಲ್ಲಿ ಮರುಳು ಜೀವಗಳೆರಡು ಧ್ರುವನಲ್ಲಿ ಕಣ್ಣಿಟ್ಟು ಸಾಗಲಿವೆ. ಆದರೆ ಅಪರಂಪಾರದ ಪಾರವಾರವು ಕೂಡ ಎದೆಯ ತೆರೆತೆರೆ ತೆರೆದು ಹಾರಿದರೂ, ಸತಿಯು ದುರ್ಭೇದ್ಯವೆನಿಸುವ ಮೌನದುರ್ಗಕೆ ಮಾರ್ಗ ತೋರಲೊಲ್ಲದು. ಮೌನದಲ್ಲಿಯು ಕೂಡ ಮಾತಿನ ಧ್ವನಿಯಿರಲೆಂದೂ ಮೂಕಮೌನವು ಶಾಪವೆಂದೂ ಕವಿಗೆ ತಿಳಿದಿತ್ತು. ಪಂಚೇಂದ್ರಿಯ ಸೃಷ್ಟಿ ಬೇಡುವ ಕವಿ ಒಂದು ಗವಿ ಹೊಕ್ಕಂತಾಯ್ತು ಆ ಸಹವಾಸವು. ಎದೆಯು ಪುಟುಗುಟ್ಟುತ್ತಿದ್ದರೂ ತುಟ್ಟಿಕಚ್ಚಿ ಹಿಡಿದು ನನ್ನಲ್ಲಿ ನಾನಿಲ್ಲ ಎಂಬಂತೆ ಕವಿಯಿದ್ದನು. ಅದೇ ಕಾಲಕ್ಕೆ 'ನರಬಲಿ' ಕವನದ ಫಲವಾಗಿ ಕವಿಗೆ ಹಿಂಡಲಿಗೆಯ ಕಾರಾವಾಸವು ಲಭಿಸಿತು; ಹಿಂಡಲಿಗೆ ಪ್ರಾಣದ ಒಗರಷ್ಟು ಹಿಂಡಿತೆಂದೂ, ಮುಂದೆ ಮುಗದದ ಮಲೆಗಾಳಿ ಮುಂದೆಳೆಯಿತೆಂದೂ ಕವಿ ಹೇಳುತ್ತಾನೆ. ಆಗ ಅವರ ಬಾಳುವೆಯೆಂದರೆ ಹರಿವ ನೀರಿನ ಮೇಲೆ ಹರಿಗೋಲಮನ ಕಟ್ಟಿ ಗೊತ್ತಿಲ್ಲದೆ ಹೊರಟ ಹಾಗೆ. ಕವಿಯು ಎದೆಯಲ್ಲಿ ಅಚಲವಾದ

ಕೆಚ್ಚಿದ್ದರೂ 'ನಿಮ್ಮಂತೆ ನನಗಿಲ್ಲ ಆ ತ್ರಾಣವು' ಎಂದು ಮನೆಯುವರ ಪ್ರತಿ ಧ್ವನಿ. ಆದ್ದರಿಂದ ಜೋಡಿಯಿಲ್ಲದ ಎತ್ತು ಎಳದಾಡುವ ಗಾಡಿ ನಡೆದಂತೆ ಒಗೆತನವು. ಆದರೇನು? ಅದು ನೆರಳು ಬೆಳಕಿನ ಕಾಲ. ಕತ್ತಲೆಯು ಮನೆಯಿಂದ ಬೆಳಕುಕಿಂಡಿಯೊಳಗಿಂದ ಗಗನದ ನೀಲಿಮೆಯೂ ಒಮ್ಮೊಮ್ಮೆ ಕಾಣದೆ ಇರುತ್ತಿರಲಿಲ್ಲ. 'ಲಲಿತಾ' ಎಂಬ ಕೂಸನ್ನು ಕಳ ಕೊಂಡ ತಾಯಿಗೆ, ಇದ್ದ ಕಿದ್ದ ಹಾಗೆ ವೈಭಾರವೂ, ಮನಶೂನ್ಯವೂ ಉಂಟಾಗಿ ಮಾತೆಲ್ಲ ನೋತವರ ಉಸಿರಾಗಿ ಬಿಟ್ಟಿತು. ಆಗ ಅವರು— "ನಿಮ್ಮ ಜೀವನ ರೀತಿ ಬೇಸಿಗೆಯ ಬಿರುಗಾಳಿ, ಅದರ ಸೆರಗಿಗೆ ನಾನು ಬರಿಗಾಳಿ" ಎಂದು ಉಸಿರುಗರೆದರು. "ನಿಮ್ಮ ಜೀವನ ಧ್ಯೇಯ ಗೌರಿ ಶಂಕರದಂತೆ ಶಿಖರವೆತ್ತಿದೆ ಮುಗಿಲಿನೆಡೆ; ನನ್ನದೆ ತಿರುಗಿದೆ ಗಂಗೆಯು ಹರಿದಂತೆ ಜನರೀತಿಯಂತೆಯೇ ನೆಲದ ಕಡೆ" ಎಂದು ಪಿಸುಗುಟ್ಟಿದರು; "ನಿಮ್ಮದೆ ಎತ್ತರಕೆ ನಾವೇನು ಬಂದೇವು? ಕಲಿತವರ ಜೊತೆಗಿಲ್ಲ ನಮ್ಮ ಕಡೆ. ನಿಮ್ಮ ಕಣ್ಮುಂದೆಯೇ ಕಣ್ಮುಚ್ಚಿದರೆ ಸಾಕು, ಗೆದ್ದೆವು." ಎಂದು ಕಣ್ಮಿಡಿದು ಗೋಳಿಟ್ಟರು. ಪಾತಾಳಗರಡಿಗೂ ಸಿಲಿಹತ್ತದಂತೆ ಪಾತಾಳ ಕ್ಕಿಳಿದ ಸತಿಯು—"ನಿಮ್ಮ ಜೀವನದಲ್ಲಿ ಮಂಗಲವಾಗಲೆಂ"ದು ಮುಗಿದಾಗ ಧ್ಯೇಯವಾದಿಯಾದ ಪತಿಯ ಅವಸ್ಥೆ ಏನಾಗಿರಬೇಕು? ಹೀಗೆ ಶಕ್ಯವು ಶೂನ್ಯಾಂಶಕ್ಕಿಳಿದು ಅಶಕ್ಯವೇ ತಾನಾದಾಗ ಶಕ್ಯತೆಗೆ ಆರಂಭ ವಾಗುವಂತೆ, ಅಂಥ ಕುದಿಕುದಿವ ಭಟ್ಟಿಯಲ್ಲಿ ಕವಿಯ ಪ್ರಕೃತಿ ಪಾಕ ಹೊಂದಿ, ಪ್ರೇಮದಲ್ಲಿ ಪರಿಣಮಿಸಿತೆಂದರೆ ಅದೇನು ಅದೃಷ್ಟವಶವೇ? ಆಗ—"ಕೊಂಕಣದ ಕಡಲಲ್ಲಿ ತೇಂಕಾಡಿ ಒಂದೆವು ನಡೆ ಗೆಳತಿ ಧೀಂ ಕಿಟ್ಟಿ ಕನ್ನಡಕೆ" ಎಂದು ಉಬ್ಬಿನಲ್ಲಿ ಮುಂದುವರಿದರು. ಏಕಾಂತದ ಈ ಜಿನುಗು ಸಂಪೂರ್ಣವಾಗಿ ಅರಿಯಬೇಕಾದರೆ, 'ಸಖೀಗೀತ'ವನ್ನು ಚೆನ್ನಾಗಿ ಅಭ್ಯಾಸ ಮಾಡಬೇಕು.

---

# ೫ ದೇಶ ಪ್ರೇಮ

## ಇಡಿಗನ್ನಡ ಕನಸು

“ಮನುಷ್ಯನಿಗಿರುವಂತೆ ನುಡಿಗೂ ದೇಹ, ಪ್ರಾಣ, ಮನಸ್ಸು, ಜ್ಞಾನಗಳಿವೆ. ನಾಡೊಂದು ದೇಹ. ಅಲ್ಲಿಯ ವಿವಿಧ ಪ್ರಾಣಿಗಳೇ ಅದರ ಪ್ರಾಣ. ಸಾಹಿತ್ಯಕಲಾಕೌಶಲ್ಯವೇ ಅದರ ಮನಸ್ಸು. ಧರ್ಮ ದರ್ಶನಗಳೇ ಅದರ ಜ್ಞಾನ. ನಾಡದೇಹದಲ್ಲಿ ನುಡಿಯೊಂದು ನಾಲಗೆ. ನಾಡಿನಲ್ಲಿರುವ ವಿವಿಧ ಜಾತಿಯ, ಧರ್ಮದ, ಕುಲದ, ಬಗೆಯ, ಮಾತಿನ, ರೀತಿಯ ಜನರನ್ನು ದಿನದಿನವೂ ಒಂದುಗೂಡಿಸಲು ನುಡಿ ಒಂದೇ ಹಾದಿ. ಕನ್ನಡಿಗರಿಗೆ ಒಂದೇ ಹಾದಿಯೆಂದರೆ ಕನ್ನಡ. ಇಂದಿನ ಜಗತ್ತಿನ ವಿವಿಧವಾದಗಳನ್ನೂ, ವಿಚಾರಗಳನ್ನೂ ಆಂದೋಲನವನ್ನೂ, ಅದರಲ್ಲಿ ನಮಗಿರುವ ಸ್ಥಾನವನ್ನೂ ಬಗೆದ ಪ್ರತಿಒಬ್ಬ ಕನ್ನಡಿಗನ ಬಾಯಿಂದಲೂ “ಇಂಥ ಕಾಲಕ್ಕೆ ಕರ್ನಾಟಕದಲ್ಲಿ ನಾನು ಹುಟ್ಟಿದೆ. ನಾನೇ ಧನ್ಯ” ಎಂಬ ಉದ್ಗಾರಗಳು ಹೊರಡಲಿಕ್ಕೆ ಬೇಕು.” ಕನ್ನಡಿಗರು ಮೊದಲು ಕಾಲಮಾಹಾತ್ಮ್ಯವನ್ನೂ, ಆಮೇಲೆ ಅಂತರ್ಮುಖರಾಗಿ ನಾವಾರೆಂಬುದನ್ನೂ ಅರಿತುಕೊಳ್ಳಬೇಕಂತೆ. ಕನ್ನಡಿಗರೆಂಬ ವ್ಯಕ್ತಿ ಪುರುಷರಲ್ಲಿ ಕನ್ನಡಿಗನೆಂಬ ಸಮಷ್ಟಿಪುರುಷನೊಬ್ಬನು ಇರುತ್ತಿರಲಿಕ್ಕೆ ಬೇಕು. ಪುಲಿಕೇಶಿ, ವೀರವಿಕ್ರಮ ಮೊದಲಾದ ಜ್ಞಾನಿಗಳಾದ ಕ್ಷತ್ರಿಯ ಪುಂಗವರು ಕನ್ನಡಿಗನೆಂಬ ಸಮಷ್ಟಿಜಾತಿಪುರುಷನ ಉಜ್ವಲ ಕರ್ಮಗಳೆಂದೂ, ವಿದ್ಯಾರಣ್ಯ, ಬಸವಣ್ಣ ಮೊದಲಾದವರು ಆವನ ಬುದ್ಧಿಯ ಜ್ಯೋತಿಗಳೆಂದೂ, ಪಂಪ, ಲಕ್ಷ್ಮೀಶ, ಹರಿಹರಾದಿಗಳು ಅವನ ರಸತರಂಗಗಳೆಂದೂ ‘ಅಂಬಿಕಾತನಯ’ರು ಹೇಳಿಬಿಡವೆ, ನೃಪತುಂಗನ ಪೂರ್ವಕಾಲವು ಅವನ ಬಾಲ್ಯವೆಂದೂ, ಚಿಕದೇವರಾಯನ ವರೆಗಿನ ಕಾಲವು ಅವನ ತಾರುಣ್ಯವೆಂದೂ, ಇತ್ತೀಚಿನದು ವಾರ್ಧಕ್ಯವೆಂದೂ, ಈಗ ಮತ್ತೆ ಹಸುತನವುಂಟಾಗಿದೆಯೆಂದೂ ಹೇಳುತ್ತಾರೆ. “ಈ ಕನ್ನಡ ಪುರುಷನ ಜೀವಜ್ಯೋತಿಯ ಸಾಕ್ಷಾತ್ಕಾರ ಮಾಡಿಕೊಳ್ಳುವುದೇ ನಮ್ಮ

ಆದ್ಯಕರ್ತವ್ಯ. ಭಿನ್ನ ಮತಗಳ ಹಿಂದೆ ಇರುವ ಒಂದೇ ಒಂದು ಬುದ್ಧಿಯನ್ನು ಕಂಡುಹಿಡಿಯುವುದು ಜ್ಞಾನ. ಕನ್ನಡವು ಹೆಚ್ಚಾದಂತೆ ಕನ್ನಡಿಗನಿಗೆ ಭೂಷಣ. ಕನ್ನಡಿಗನು ಹೆಚ್ಚಿನವನಾದಂತೆ ಕನ್ನಡಿಗರಿಗೆ ಗೌರವ. ನಮ್ಮ ನುಡಿಯು ಜಗತ್ತಿನ ತಿರುಳನ್ನೂ, ಜಗದೀಶನ ಹುರುಳನ್ನೂ ತೋರಿಸುವ ಕನ್ನಡಿಯಾಗಬೇಕು. ಜಗತ್ತಿನ ಸೊಬಗನ್ನೂ, ಜಗದೀಶನ ಸೊಗಸನ್ನೂ ಸವಿಸವಿದು ನಲಿಯುವ ನಾಲಗೆಯಾಗಬೇಕು. ಜಾತಿ, ಮತ, ಧರ್ಮ, ಪಂಥ, ಕುಲಗಳಿಂದ ಭಿನ್ನರಾದವರನ್ನೂ, ಮಾನವನ ಸೋದರ ಸಂಬಂಧವನ್ನೂ ಒಪ್ಪಿಕೊಳ್ಳುವಂತೆ ಮಾಡಿಸುವುದೇ ಕನ್ನಡದ ಪ್ರಾಣ. ಕರ್ನಾಟಕ ಏಕೀಕರಣವೇ ಅದರ ದೇಹ. ಮನೆ, ಮಠ, ಕುಲಗಳನ್ನು ಅಷ್ಟಕ್ಕಷ್ಟು ಇಟ್ಟುಕೊಂಡು ದೇಶದ ಸಾರ್ವಜನಿಕ ಹಿತದ ಬುದ್ಧಿಯಿಂದ ನಡೆಯುವದರಲ್ಲಿ ತ್ಯಾಗವಿದೆ. ಅಷ್ಟಾದರೂ ಮಾಡಲೇಬೇಕು. ಕನ್ನಡ ಸಂಸ್ಕೃತಿಯ ಬೀಜಕಲ್ಪನೆಯು ಎಲ್ಲ ಉದಾರ ಭಾವನೆಗಳ ಉಗಮುವಾಗಿದೆ. ಭಾಷೆಯು ಧರ್ಮದಂಥ ಮಹತ್ತ್ವದ ಕಾರ್ಯಮಾಡಲಿದೆಯೆಂಬುದು ಇನ್ನೂ ಎಷ್ಟೋ ಜನರಿಗೆ ತಿಳಿದಂತಿಲ್ಲ. ಕನ್ನಡದ ಹೆಸರಿನಿಂದ ಕರ್ನಾಟಕದವರು ಒಗ್ಗೂಡಲಾರರಾದರೆ, ಹಿಂದುಸ್ಥಾನಿಯ ಹೆಸರಿನಿಂದ ಹಿಂದುಸ್ಥಾನ ಒಂದಾದೀತೆ? '' ಈ ವಿಚಾರಗಳ ಬೆಳಕೇ ಶ್ರೀ ಬೇಂದ್ರೆ ಅವರ 'ದೇಶಪ್ರೇಮ.'

## ಪೂರ್ವಿಕರ ನೆನಪು

ದೇಶಪ್ರೇಮದಲ್ಲಿ ಸಾಹಿತ್ಯಪ್ರೇಮವಿದೆ; ದೇಶವಾಸಿಗಳ ನಲುವಾಗಿ ಬಂಧುಭಾವವಿದೆ; ದುಃಖಿತರಲ್ಲಿ ಸಹಾನುಭೂತಿಯಿದೆ; ವೈಭವದಲ್ಲಿ ಅಭಿಮಾನವಿದೆ; ಪ್ರಗತಿಯಲ್ಲಿ ಆಶೆಯಿದೆ; ದೇಶದ ಒಂದು ಹುಲ್ಲುಕಡ್ಡಿಯ ಬಗೆಗೂ ಆದರ ಭಾವವಿದೆ; ನನ್ನದೆಂಬ ಸಾತ್ವಿಕ ಅಹಂಕಾರವಿದೆ. ಆದುದರಿಂದ ಕವಿಯು ಪ್ರಾಚೀನ ಕವಿಗಳನ್ನು ನೆನೆವಂತೆ, ಆಧುನಿಕ ಕವಿಗಳನ್ನು ಮರೆತಿಲ್ಲ; ಕವಿಗಳಂತೆ ವಿಭೂತಿಗಳನ್ನೂ, ಜ್ಞಾನಿಗಳನ್ನೂ ಸ್ಮರಿಸಿದ್ದಾನೆ; ಗತವೈಭವದೊಡನೆ ಪ್ರಚಲಿತ ವೈಭವನ್ನೂ ಹೊಗಳಿದ್ದಾನೆ. ಹಂಪೀ ವಿಜಯನಗರಗಳನ್ನು ಕಂಡು—"ಬಿದ್ದ ರಾಜ್ಯವಿದಲ್ಲ,

ಉದ್ಬುದ್ಧವಾಗಿದ್ದು, ಎದ್ದ ರಾಜ್ಯದ ಮೊಳಿಕೆಯದು" ಎಂದು ಹೆಮ್ಮೆ ಪಟ್ಟಂತೆ "ಧರ್ಮಬಲದಿಂದೇರಿ ಕರ್ಮಬಲದಿಂದಿಳಿದು, ಮರ್ಮದೊಳು ನೆಡುವಂತೆ ಸಪ್ರಯೋಗಿಕವಾಗಿ ಕಲಿಸುವವು ತತ್ತ್ವ" ವೆಂದು ಇತಿಹಾಸ ನೀತಿಯನ್ನು ಕಲಿತುಬಂದಿದ್ದಾರೆ. ಗೊಮ್ಮಟ, ಸಾಸಿವೆ ಗಣಪ, ಗೋಲ ಗುಮ್ಮಟ, ಹಳ್ಳಿಹಳ್ಳಿಯ ಶಿಲಾಶಾಸನಗಳನ್ನು ಕಂಡು— "ದೊಡ್ಡವರ ದೆಲ್ಲವೂ ದೊಡ್ಡದೆಂಬುವ ಮಾತು ಸುಳ್ಳಲ್ಲ. ಅವರ ಜಾಗೃತಿಯು ಘನ, ಕೃತಿಯು ಘನ, ವಿಸ್ಮೃತಿಯೂ ಘನ. ದೊಡ್ಡವರು!" ಎಂದು ವಿಸ್ಮಯಪಟ್ಟಿದ್ದಾರೆ. ಅದರಂತೆ— "ಪರಶುರಾಮನ ಮಹೋತ್ತುಂಗ ದೋರ್ದಂಡ ಉದ್ದಂಡ ಸಹ್ಯದಸಹ್ಯ ಸಾಮರ್ಥ್ಯದಲಿ ನೀಡಿಕೊಂಡ ಘಾಲಸಾಗರದ ಆಣೆಕಟ್ಟನ್ನೂ— "ಬಾಲಕರ ಮಣ್ಣಾಟದೊಳಗಿನೊಡ್ಡು ಗಳನನುಸರಿಸಿ, ಬೆಟ್ಟದ ಪಾದದೆಡೆಗೆ ಕುಳಿತಿದೆ ಧೂರ್ತವಿನಯದಲಿ" ಎಂದು ಬಣ್ಣಿಸಿದ್ದುಂಟು; ಗುಡುಗೇ ನೀರಾದ ಶರಾವತಿಯ ತಡಸಲನ್ನು ಕಂಡು ಅದ್ಭುತ ಕರೆವುದು 'ಬಾ ಇಲ್ಲಿ!' ಭಯಗದರಿಸುತ್ತಿದೆ 'ನಿಲ್ಲಲ್ಲಿ'; ಅದನ್ನು ಕೇಳಿ "ನಿಂತಲ್ಲಿಯೇ ಕಾಲಂಟಿತ್ತು; ಊಹೆದಿಗಂತಕೆ ಮುಟ್ಟಿತ್ತು" ಎನ್ನುವರು. ಇವು ಕರ್ನಾಟಕದ ಪ್ರಾಕೃತಿಕ ಸೊತ್ತು ಗಳಾದರೂ ಅವನ್ನು 'ನನ್ನವೆಂ'ಬ ಅಭಿಮಾನದಿಂದ ಕಂಡು ಸ್ಮರಿಸಿದವು ಗಳಾಗಿವೆ. ಇರಲಿ. "ಹೆಸರಾಗಿಯೂ ಕೂಡ ಹೇಳ ಹೆಸರಿಲ್ಲದ, ಮಕ್ಕ ಳಿರುವರೆಂದರು ಕೂಡ ಯಾರೂ ನಂಬದ, ಮನೆಯೇ ಮುನಿದಿದ್ದಿರಲು ಯಾದೇಶವೆನ್ನುವ, ವದ್ಯಪಕ್ಷ" ಬಂದ ಕನ್ನಡನಾಡಿನ ಆದಿಕವಿಯೆನಿಸಿದ ಪಂಪನನ್ನು ನೆನೆದು— "ಬರೆವ ಕೆಯ್ಯು ಗಂಡುಗೆಡದೆ ಬೀರಕಡಗ ತೊಟ್ಟಿತು. ಹರಿವಕಾಲು ಇಲ್ಲಿ ನಿಂತೆ ಅಲ್ಲಿ ಮುಗಿಲ ಮೆಟ್ಟಿತು." ಎಂದೂ ತಲೆದೂಗಿ— "ಶ್ರೀ ಸರಸ್ವತೀಯು ದುರ್ಗೆ ವರದ ಹಸ್ತವಿಟ್ಟರೆ ಈ ಸಕಾಲದಲ್ಲಿ ಪಂಪನಂಥ ಜನರು ಹುಟ್ಟರೇ?" ಎಂದು ಆತ್ಮವಿಶ್ವಾಸ ವನ್ನು ತಳೆದಿದ್ದಾರೆ. ಕನ್ನಡ ಆದಿಕವಿಯನ್ನು ನೆನೆದಂತೆ, ಸಂಸ್ಕೃತ ಆದಿ ಕವಿಯೂ ಕವಿಗೆ ಸ್ಮರಣೀಯನೇ ಸರಿ.— "ವೇದಕವಿ ಆದಿ ಕವಿಗೆ ಎಂದ— 'ಸೋತೆನು ಛಂದದೊಂದು ಸವಿಗೆ!" ಇನ್ನು ವೀರ ಮುದ್ದಣ ಕವಿಯು ತನ್ನ ನವಕೃತಿಯ 'ಜನ್ನಗುದುರೆ' ಯನ್ನು ಜಗ

ದೊಳಗೆ ಕಳಿಸಿದ್ದಕ್ಕೆ— "ಉಳಿಸಿದನು ಕನ್ನಡದ ಹೆಸರನ್ನು ಕಡೆತನಕ। ಗಳಿಸಿದನು ಸತ್ಕೀರ್ತಿಯನ್ನು" ಎಂದು ಸೈವಡುವರು. 'ಅಲ್ಲಮಪ್ರಭು' ಗಳ ವಚನಗಳನ್ನೋದಿ— "ಶೂನ್ಯದಲಿ ಹುಟ್ಟುಗಟ್ಟಿತು ಹದುಳ ದೊಂದು ಹುಣ್ಣಿಮೆ; ಜೆಡಗುಬಿನ್ನಾಣ ಬಿಡಿಸಿ ಬೆಳದಿಂಗಳವ ಕುಡಿದ ಮಧುಮತ್ತ ಚಿತ್ತ ಚಕೋರ ಕೇಳುತಿದೆ. ಹೇಳುತಿದೆ— ಬೇರೆ ದರುಶನ ವೇಕೆ? ಮಾತೆ ಜ್ಯೋತಿರ್ಲಿಂಗ." ಎಂದೆನಿಸಿದ್ದು ಅರಿದೇ? "ಯಾರ ವಚನದ ಗಾಳಿಗೆದ್ದ ಹಾದಿಯ ಹುಡಿಯು। ಏರಿ ಗಗನಾಂಗಣ ದೊಳಾಯ್ತು ಬೆಳಕಿನ ಕುಡಿಯು" ಆ ಬಸವಣ್ಣನವರ ನೆನಪು ಕವಿಗೆ ಆಗದಿದ್ದೀತೆ? ರತ್ನಾಕರ ಕವಿಗೆ ಕೃತಜ್ಞತೆ ಸಲ್ಲಿಸಿದ್ದು ಹೀಗೆ— "ನಿನ್ನ ಶೃಂಗಾರ ಪಾವನ ಗಂಗೆಯೊಲು; ರಸವು ಸಮರಸವು; ರುಚಿಯು ಶುಚಿ. ನೆಲಮುಗಿಲುಗಳನೊಂದೆ ಅಂಗೈಲಿ ಹಿಡಿವಂತೆ ಭೋಗಯೋಗವ ಹೊಂದಿಸಿಹ ದಿವ್ಯ ಭವ್ಯ ಕವಿ!" ಅದರಂತೆ ಆಧುನಿಕರಲ್ಲಿ "ಪಾರ ತಂತ್ರ್ಯ ಸ್ಥಿತಿಯ ಕುಲಸಂಹಾರವೇ ತಪಃಕೃತಿ''ಯೆಂದ 'ಶಾಂತಕವಿ' ಗಳನ್ನು ಮರೆಯಬಹುದೇ? ಅದರಂತೆ, "ನವ ಕವನಕ್ಕೆ ರನ್ನಗನ್ನಡಿಯೇ, ಮೂರ್ತಿವೆತ್ತ ತೆಂಗಾಳಿಯೇ 'ಕವಿಶಿಷ್ಯ' ನೆಂಬುವಾ ಕೀರ್ತಿ ಕವಿಗೂ ಮೇಲು" ಎಂದು ಪಂಜೆ ಅವರನ್ನು ಕುರಿತ ಹಾಡು. ಪಂಪಾಯಾತ್ರೆಯ 'ವಿ. ಸೀ.' ಅವರನ್ನೂ ಮರೆತಿಲ್ಲ. ಅಂದಮೇಲೆ 'ಅಗಸ್ತ್ಯ' ರನ್ನೂ ಬುದ್ಧನ ಸ್ಮಿತವನ್ನೂ ಮರೆಯಬಹುದೇ? ವಿ. ಸೀ. ಯವರಿಗಾಗಿ— ''ಹಾಳಿಗೂ ಬಾಳುಂಟೇ? ಉಂಟು, ಉಂಟು? ಮೌನಕ್ಕೆ ಮಾತುಂಟೇ? ಉಂಟು, ಉಂಟು?" ಕಾವ್ಯ ಕಲೆಗೆ 'ಗುರುದೇವ' ರಾದ ಶ್ರೀ. ರವೀಂದ್ರ ನಾಥರನ್ನು— ''ಜನಕ ಹಿಗ್ಗಿನ ಹಾಡು ನೀಡಾಂವಾ। ಬಿಸಿಲ್ಹಣ್ಣು ಉಂಡೀದಿ, ಬೆಳದಿಂಗಳ ಕಂಡೀದಿ, ಚಳಿಮುದ್ದುಕೊಂಡೀದಿ ಗುರುದೇವಾ। ಹಾಡಿ ಹಣ್ಣಾದೀ ನೀ। ಜಗದ ಕಣ್ಣಾದೀ ನೀ'' ಎಂದು ಸ್ತುತಿಸಿದ್ದಾರೆ. ''ನನ್ನ ನಿನ್ನ ಬೆನ್ನ ಬಳಿ ವಿಶಾಲವೃಕ್ಷ ಬೆಳೆದಿದೆ" ಎಂದು 'ಚೆನ್ನ' ಕವಿತೆಯ ಮೊದಲಮಾತಾಗಿದೆ. ಕನ್ನಡ ರಾಷ್ಟ್ರಪ್ರಪಂಚವನ್ನು ಗೈದ ಸಂಸಾರಿಯಾದ 'ವಿಜಯ ವಿದ್ಯಾರಣ್ಯರನ್ನು ಸ್ಮರಿಸಿದ್ದು ಹೇಗೆಂದರೆ— "ವೈಯೆಲ್ಲ ಕಣ್ಣುಳ್ಳ ಮುಂದಾಳು ಬೇಕು; ಕುರುಡುಬಳ್ಳಿಯ ಮೆಳ್ಳ

ನಾಯಕರು ಸಾಕು!'' ಮೈಸೂರಿನ "ಹೊನ್ನೆಲ್ಲ ಹೊರಮಿಂಚು, ಮಿಂಚೆಲ್ಲ ಸುಡುಬೆಂಕಿ, ಉಸಿರೆಲ್ಲ ಬರಿಹೆಸರು, ನಯ ಭಯದ ಕುರುಹು; ಮಾತುಕತೆ ಸೊಗಸುಸೊಬಗುಗಳಿಲ್ಲ ಬೇರೆ ತಾಳಕೆ ಕುಣಿವ ಸೂಳೆ ಬೆಡಗು'' ಎನ್ನುವವರಿಗೆ ಹೇಳುವಂತಿವೆ. — "ಪಂಚಭೂತಗಳಿಂತು ಹೊಂಚುಹಾಕಿರಲಾಗಿ ಸಂಚುಕೂಡದಲಿರದೆ ಹೊಸದೊಂದು ಜಗಕೆ? ಕಾಣದೇ? ಕಾಣದೇ? ಈ ಕಣ್ಣುಮುಚ್ಚಿ ತೆರೆ ಆ ಕಣ್ಣನೊಂದ.''

## ತುತ್ತಿನ ಚೀಲ

ಕಾವ್ಯವಾಗಲಿ, ಸಾಹಿತ್ಯವಾಗಲಿ ನೆತ್ತಿಗಾಗಿ ಉಣ್ಣುವ ಅನ್ನ ವಾಯ್ತು; ಒಡಲಿಗೆ ಬೇಕಾಗುವ ಅನ್ನದ ತೊಡಕು ಬೇರೆಯೇ ಇದೆ. ಕವಿ ಹಸಿದವರನ್ನು ಕಂಡು ಒಂದು ಕವಿತೆ ಬರೆದರೆ, ಅನ್ನದ ತೊಡಕು ಬಿಡ ಲಾರದು; ತುತ್ತಿನ ಚೀಲ ತುಂಬದು. ಆದರೆ ಕವಿ ಅನ್ನದ ವಿಷಯ ದಲ್ಲಿ ಮಾಡಿದ ವಿಚಾರಗಳು ಸ್ವಲ್ಪವೇ ಕಂಡರೂ, ಬಹಳ ಚೆನ್ನಾಗಿ ಮಾಡಿದ್ದಾರೆಂದು ಕಂಡುಬಾರದೆ ಇರದು. ಆ ಮಾತು ಬೇರೊಂದು ಸ್ಥಳದಲ್ಲಿ ವಿವರಿಸಬೇಕು. ಹಸಿದವರಿಗಾಗಿ, ಬಡವರಿಗಾಗಿ ಕವಿ ಏನೆನ್ನು ತ್ತಾರೆ? ಅವನ್ನೋದಿ ಇದ್ದುಳ್ಳವರ ಹೃದಯ ಪರಿವರ್ತನೆಯಾಗು ತ್ತಿದೆಯೇ ನೋಡೋಣ. "ಬೈಗೂ ಬೆಳಗೂ ಛಿಟಿ ಛಿಟಿ ಬೆಂಕಿ, ಡೊಂಬರ ಪೂಜೆ, ಗಾಳಿಯ ಎಡೆ, ಬೊಬ್ಬೆಯ ಗಂಟೆ! ಅನ್ನಬ್ರಹ್ಮದ ದೇಗುಲದಲ್ಲಿ!'' ಆದರೆ ಜೀವವೆಲ್ಲಿದೆ? ಅದು, "ಶಬ್ದಬ್ರಹ್ಮದ ಗುಮ್ಮಟದಲ್ಲಿ, ಪಾಪಪುಣ್ಯಗಳ ಜಾಳಿಗೆಯಲ್ಲಿ ನೇತಿದೆ ಜೋತಿದೆ; ಜೀವದ ಜೇಡ!'' ಯಾಕಂದರೆ, ಇನ್ನೊತ್ತಟ್ಟಿಗೆ "ವೈವುಳ್ಳವರಿಗೆ ದಯವೇ ಇಲ್ಲ; ತಿತ್ತಿರಿ ತುಂಬಿದೆ ಕೂಳಿನ ಕೋಟೆ! ಬಿಡುಗಣ್ಣವರಿಗೆ ಕಾಣುವದಿಲ್ಲ!" ಒಂದು ಕಡೆಗೆ ಹಾಡಿನ ಹಿಗ್ಗು; ಇನ್ನೊಂದೆಡೆಗೆ ಗೋಳಿನ ಕಿಚ್ಚು! "ಹಾಡುವ ಸಭೆಯಲಿ ನರಳುವರುಂಟೇ? "ಕಿಕ್ಕಿರಿ ತುಂಬಿದೆ ಭೂಮಿಯ ಕಣಜ; ಕಕ್ಕಸಬಡುತಿದೆ ಬೊಕ್ಕಸದೊಡಲು" ಆದರೂ ದೇವರು ಕಣ್ಮುಚ್ಚಿದ್ದಾನೆ; ಕಿವಿ ಮುಚ್ಚಿದ್ದಾನೆ. ಅವನ್ನು ತೆರೆಸುವ ದಾರಿ? ಒಂದಿದೆ; ಅದೊಂದೇ. "ದೇವರದೊಂದು ಗೋರಿಯ ಕಟ್ಟಿ,

ಧರ್ಮದ ಧೂಪಕೆ ಬೆಂಕಿಯಸಿಕ್ಕಿ, ಗಣಗಣ ಬಾರಿಸಿ ಪ್ರಾಣದ ಗಂಟೆಯ,
ನೆಲವನ್ನೆಲ್ಲಾ ತುತ್ತುವೆನೆಂದು ಬಡವರ ಬಗ್ಗರ ತುತ್ತಿನ ಚೀಲದ ಒಳ
ಗಿನ ಒಳಗಿನ ಒಳದನಿಯೊಂದು ಗದರುತ್ತಿಹುದು; ಗರ್ಜಿಸುತಿಹುದು!”
ಆದರೆ ಪ್ರತ್ಯಕ್ಷವಾಗಿ ಸೇವಿಸುತ್ತಿರುವ ಭೂಮಿತಾಯಿಯ ಚೊಚ್ಚಿಲ
ಮಗನಿಗೆ— “ದಿನವೂ ಸಂಜೆಗೆ ಜೆವರಿನ ಜಳಕ, ಉಸಿರಿನ ಕೂಳಿಗೆ
ಕಂಬನಿ ನೀರು! ಹೊಟ್ಟೆಯು ಹತ್ತಿತು ಬೆನ್ನಿನ ಬೆನ್ನು! ಎದೆಯ ಗೂಡಿ
ನೊಳು ಚಿಂತೆಯ ಗೂಗಿ! ಮೋರೆಯು ಸಾವನು ಅಣಕಿಸುತಿಹುದು!
ಕೊರಳಿಗೆ ಹತ್ತಿದೆ ಸಾಲದ ಶೂಲ!’’ ಎನ್ನುವಂಥ ಸ್ಥಿತಿಯಲ್ಲಿ ಸಾವಿನ
ಬೆಳಕನ್ನು ಕಾಣುವ ದಾರಿ ಕಾಯುತ್ತ ತಳಮಳಿಸುತ್ತ ಬಿದ್ದಿದ್ದಾನೆ.
“ದೇಶವು ಧರ್ಮದ ಪ್ರಥಮ ಸಾಧನ ಎಂಬುದೇ ನಿಜವಾದರೆ ಅನ್ನವು
ಅದರ ಪ್ರಥಮ ಸಮಸ್ಯೆ. ಈ ಸಮಸ್ಯೆಯನ್ನು ಸಮಗ್ರವಾಗಿಯೂ
ಬಿಡಿಸಿದ್ದೇ ಆದರೆ ಧರ್ಮವು ಇನ್ನೊಂದು ಘಟ್ಟ ಮೇಲಕ್ಕೇರಲೇಬೇಕು.
ಮಾನವನ ದೀನತೆಯೂ ಧರ್ಮದ ಅತಂತ್ರತೆಯೂ ಅನ್ನದ ಅವ್ಯವಸ್ಥೆಯ
ಮೂಲಕವಾಗಿಯೇ ಇದೆ. ಇಂದು ಜ್ಞಾನದ ಎತ್ತರ, ಧರ್ಮದ ಒರೆ,
ಕಾಮದ ಆಳ, ಅನ್ನದ ಅಳತೆ ಮತ್ತೊಮ್ಮೆ ನಿರ್ಣಯವಾಗಬೇಕಾಗಿದೆ.”

ಅದಕ್ಕೆ ಉಪಾಯವೇನೆಂದರೆ— “ಅಖಂಡ ಭೂಮಿಯು ಖಂಡಿತ
ವಾಗಿರುವದೇ— ಧರ್ಮವೃಕ್ಷದ ಮೂಲಕ್ಕೆ ಹಾಕಿದ ಕೊಡಲಿಯ ಪೆಟ್ಟು.
ಧಾರಿಣಿಯನ್ನು ಏಕಧಾರಣೆಗೆ ತರುವದೇ ಧರ್ಮಸಂಸ್ಥಾಪನೆಯ ಪ್ರಥಮ
ಕಾರ್ಯ. ಅನ್ನಪೂರ್ಣೆಯನ್ನು ಸ್ವತಂತ್ರಮಾಡುವವರೆಗೆ ಧರ್ಮವು ಅತಂತ್ರ
ವಾಗಿರತಕ್ಕದ್ದು. ಧರ್ಮವು ಅರ್ಥಮೂಲವಾಗಿದೆ. ಆ ಸಮುದ್ರಪರ್ಯಂತ
ಪೃಥ್ವಿಯನ್ನು ಏಕಛತ್ರಾಧಿಪತ್ಯಕ್ಕೆ ತಂದು ಆಳಬೇಕೆಂಬ ಹಿಂದಿನ
ಹಿರಿಯರ ಆಶೆಯ ಅರ್ಥವೂ ಇದೇ.’’

## ಅನ್ನದೇವರ ದಾರಿ

ಸಮುದ್ರವು ರತ್ನಾಕರವೆನಿಸಿದರೂ ಕುಡಿಯುವುದು ಕಣ್ಣೀರು;
ವಸುಂಧರೆಯೆನಿಸುವ ಭೂಮಿತಾಯಿ ನಿರಾಧಾರ ಮಗುವನ್ನು ಪಡೆ
ದಿದ್ದಾಳೆ.—ಸತ್ತವನು ಗೆದ್ದಂತೆ; ಇದ್ದವನು ಸತ್ತಂತೆ. ಆದರೆ ಪ್ರಾಣಿ

ಹಾಳಾದರೂ, ಅವನೆಲುಬು ಹೂಳಿದರೂ, ಮಣ್ಣು ತಿನ್ನುತ್ತ ಬಾಳೀವು ಅನ್ನುತ್ತವಲ್ಲ! ಕಾಡುವ ದೇವನು ಬಂದನು; ಬೇಡುವ ದೇವನು ಬಂದನು; ಮಡುಕುವ ದೇವನು ಬಂದನು; ಮಿಡುಕುವ ದೇವನು ಬಂದನು. ಯುದ್ಧದೇವನು ಬಂದರೂ ಬುದ್ಧದೇವನು ಬಂದರೂ ಅನ್ನದೇವರು ಮಾತ್ರ ಇನ್ನೂ ಬರಲಿಲ್ಲವಲ್ಲ! ಕೂಳು ಕಾಡ ಉರುವಲಂತೆ ಹೊಗೆಯಘಗೆಯು ಹುಟ್ಟಿಸುವದು; ಉರಿಯುನಲ್ಲೇ ಅಟ್ಟಿಸುವದು. ಕೈಯು ತುತ್ತು ಬಾಯಿಗಿಲ್ಲ ಅನ್ನುವರಲ್ಲ! ಅದು ಸುಳ್ಳು. ಬಾಯಿಗಿದ್ದು ಹೊಟ್ಟೆಗಿಲ್ಲವೆನ್ನುವುದು ಸತ್ಯ. ಪ್ರಾಣವೊಂದು ಮೂಕಪ್ರಾಣಿಯೆಂದು ಸಾವು ಅದನ್ನು ಬಲಿ ತೆಗೆದುಕೊಳ್ಳಬೇಕೆನ್ನುತ್ತಿದೆಯೋ? ಹಾಗಾದರೆ ಅದಕ್ಕೂ ಸೈ. "ನಾವು ಕತ್ತಲನ್ನು ಕೆಡಿಸಿ ಬೆಳ್ಳಬೆಳಗುಬೆಳಗಬಲ್ಲ ಬೆಂಕಿ ಕಿಡಿಯು; ಬೆಳಕ ಮಿಡಿಯು." ಹತ್ತು ಅವತಾರಗಳು ಭೂಮಿಗಿಳಿದರೂ ಅನ್ನದ ತೊಡಕನ್ನು ಬಿಡಿಸಲೇ ಇಲ್ಲ. ಒಂದೇಸವನೇ ಮನುಷಿನ ಮಕ್ಕಳ ಜೀವ ನಡೆದಿದೆ. ''ಮಡಿವರ ಉಸಿರಿಗೇ ದಣಿವಿಲ್ಲ; ಕೊನೆಗೂ ತಣಿವಿಲ್ಲ; ಕೂಸುಗಳಾಟಕೆ ಕಳೆಯಿಲ್ಲ; ಭೂಮಿಗೆ ಬೆಳೆಯಿಲ್ಲ; ಹೆಣ್ಣಿನ ಕಂಬನಿ ತೊಡೆದಿಲ್ಲ; ಗಂಡಿಗೆ ಬಿಡುವಿಲ್ಲ; ಹಸಿವೆಯ ಕಹಳೆಯ ಕೂಗನು ಕೇಳಿ ಜೀವವು ನಡಗುವದು."

## ಧಾರಿಣೀಧರ್ಮ

"ಒಂದು ಸಮಾಜದಲ್ಲಿ ಬಡವರಿರುವದು ಆ ಸಮಾಜಕ್ಕೆ ಕೊರತೆ. ಬಡವರು ದೀನರಾದಂತೆ ಬಲ್ಲಿದರಲ್ಲಿ ಸೊಕ್ಕು ಹೆಚ್ಚು. ಅವರು ದಿಟ್ಟರಾದರೆ ಇವರಿಗೆ ಹೆದರಿಕೆ. ಅವರು ಹಕ್ಕಿನ ತಿರುಕರಾದರೆ ಇವರು ಶಾಸ್ತ್ರದ ಧಾರ್ಮಿಕರು. ಅವರು ನಿರುಪದ್ರವಿ ಕೂಲಿಕಾರರಾದರೆ ಇವರು ಜಂಭದ ಪರೋಪಕಾರಿಗಳು. ಅಂತೂ ಅವರಿಗೊಂದು ವಿಕಾರ; ಇವರಿಗೊಂದು ವಿಕಾರ. ಬಡತನವು ಸಾಮಾಜಿಕ ಪಾಪ. ಭೂಮಿತಾಯಿಯು ಬಡವಿಯೆಲ್ಲ; ಆವಳು ಕೂಳಿನ ಕಣಜ; ಹಣದ ಕಣಿ. ಅವಳ ಮಕ್ಕಳಿಗೆ ಬಡತನವೆಂದರೇನು? ಬಡತನದ ರೂಪವೇನೇ ಇರಲಿ, ನಾಮವೇನೇ ಇರಲಿ; ಅದನ್ನು ಭೂಮಿಯಿಂದ ಕಿತ್ತೊಗೆಯಬೇಕು.'' ಹಾಗೆ

ಮಾಡಲಿಕ್ಕೆ ಬಾಳ ಗರುಡಿಯಲ್ಲಿ ಬೆಳೆದ ಆಳು ಬೇಕು; ಅಂಥವರು ಬಂದು—''ಬೀಸಾಡಿಬಿಡಿರಿ ಅತ್ತ ಹುಲ್ಲ ಬದುಕ ಹೊರೆಯನು; ಹರಿದು ತೂರಿದು ಎಸೆಯಿರತ್ತ ತೆರೆಯನರೆಯ ಜರೆಯನು; ಮೆಟ್ಟನಿಲ್ಲಿ ಜಟ್ಟಿಯಂತೆ ತಿರಿತಿರುಗುವ ತಿರೆಯನು'' ಎಂದು ಗರ್ಜಿಸಿದರೆ, ಕಲ್ಲಲಿದರೂ, ನೀರುಲಿದರೂ, ಮಿಂಚೊಲಿದರೂ ಮುಗಿಲಿಗೆ ನಿಚ್ಚಣಿಕೆ ಹಚ್ಚಲಾಗುತ್ತವೆ; ಹಳೆಯ ಹಾಳ ಹೊಳೆದಾಗ, ಬಾಲಚಿಕ್ಕೆ ಕೀಳಿದಾಗ ಬೇರೆ ಕಾಲವು ಬಂತೆನ್ನ ಬೇಕು. ಅಲ್ಲಿಯವರೆಗೆ ''ನೆಲದ ಬಸಿರೊಳುರಿಯುತಿದೆ; ಬೆಟ್ಟದೆದೆಯು ಬಿರಿಯುತಿದೆ; ನೀರು ಮೀರಿ ಹರಿಯುತಿದೆ, ಕೆಂಪುನೆಲದಲಿ'' ಎಂದು ನರಳುವ ದನಿಯಲ್ಲಿ—',ಧರ್ಮಾಸನ ಹೊರಳುತಿವೆ; ಸಿಂಹಾಸನ ಉರುಳುತಿವೆ; ಜಾತಿಪಂಥ ತೆರಳುತಿವೆ ಮನದ ಮರೆಯಲಿ'' ಎಂಬ ಹಾಡು ಉಲಿಯುವದು.

## ಕೂಡಿಕೆಗಾಗಿ ದೂಡಿಕೆ

ಹುಳುಗಳೆನ್ನಿಸುವ, ಕುರುಡುಕುನ್ನಿಗಳೆನ್ನಿಸುವ, ಹುಚ್ಚುಕುರಿ—ಹೊಸ ಹೊಚ್ಚಮರಿಯೆನ್ನಿಸುವ ಭಾರತದ ಮೂವತ್ತುಮೂರು ಕೋಟಿ ಜನರ ಪ್ರಶ್ನೆ ಅಷ್ಟೇ ಅಲ್ಲ ಇದು; ಗಂಡುತನಕೆ ಸೊನ್ನಿಯಾದ, ಸೋದರರು ಇದ್ದರೂ ಆದರದ ನುಡಿಯಿಲ್ಲದ, ಮಣ್ಣುಮುಕ್ಕುವ, ಮಸಣದಲಿ ಬಿಕ್ಕುವ, ಹಾಳರ್ಧ ಹೊಲೆಯರೆಂದೂ, ಬೀಳರ್ಧ ಹೆಣ್ಣು ಎಂದೂ ಹೋಳಾಗಿರುವ ಜಾತಿಯ ಪ್ರಸಂಗವಷ್ಟೇ ಅಲ್ಲ; ತೊಗಲುಚೀಲಗಳಲ್ಲಿ ಬದುಕುನಡಿಸಿದ, ಹೊಟ್ಟೆಹೊಸೆಯುವುದೇ ಬಾಳ್ವೆಯೆಂದೂ, ಸಿದ್ದೆಯೇ ಹಿಗ್ಗೆಂದೂ ತಿಳಿದ ದುಃಖಿತ ಮಾನವರ ಉದ್ಧಾರದ ವಿಚಾರ; ಅವರು ಸ್ವರ್ಗಕ್ಕೆ ದಾಳಿ ಒಯ್ಯಬೇಕಾಗಿದೆ! ಮನದ ಚೊಚ್ಚಿಲಮಗನಾದ ನರಪಶುವು ನರಹಸುಗಳನ್ನೆಷ್ಟೋ ತಿನ್ನುವದಿಲ್ಲವೇ? 'ಆ ಕ್ರೌರ್ಯವನ್ನು ತಪ್ಪಿಸುವ ರಕ್ಷೆ. ರಕ್ಷಕನೆಂದು ತಿಳಕೊಂಡ ರಾಕ್ಷಸನೂ, ಕರುಳನ್ನೇ ತಿಂದುಕೊಂಡ ಕರುಣಿಯೂ ಆದ ಕುರುಡ ದಬ್ಬಾಳಿಕೆಯ ನೆತ್ತಿಗೇರಿದ ಕಣ್ಣು ಇಳಿಸುವ ಎತ್ತುಗಡೆ. ಕ್ಷಮೆಯ ಜಾತಿವೈರಿಯಾದ, ನ್ಯಾಯನೀತಿಗಳನ್ನು ತೂರಿದ, ಪ್ರಳಯ ತಾಂಡವದ ಪ್ರತಿನಿಧಿಯಾದ ನರಕಯಾತನೆಯ

ಮಾನಸಪುತ್ರನನ್ನು ಓಡಿಸುವ ಸಾಹಸ. ಎದೆಯವೇದಿಕೆಯನ್ನು ತುಳಿದು. ಜ್ಞಾನಶಕ್ತಿಯ ನಿತ್ಯಾನಂದಾದೀಪದಂಥ ಮಿದುಳಿನ ತಲೆಗಳನ್ನು ಮೆಟ್ಟಿ ಸತ್ಯವೀರರ ಉಸಿರಕಣೆಗಳಿಗೆ ಬೆನ್ನುಕೊಟ್ಟು, ಸಾಧ್ವಿಯರ ಕಣ್ಣೀರಿನ ನಂಜುಕುಡಿದು. ಕೋಪದ ಪಿತ್ತವನ್ನು ಕಾರಿಕೊಳ್ಳುವ ವಿಕಾರಕ್ಕೆ ಮುಟ್ಟು. ಕುಣಿಮಣ್ಣಿನ ಮೈಲಿ ತಳೆದು, ಚಿತೆಬೆಂಕಿಯ ಬಣ್ಣತೊಟ್ಟು, ಗೋರಿ ಹೂವಿನ ಕಣ್ಣುಪಡೆದು ಹುಟ್ಟಿದ ಶಾಂತಿಯ ಮಲತಂಗಿ ಸಾಂತ್ರಿಯ ಅಂತ್ಯವಿಧಿ. ಬಾಣಂತಿ ಎಲುಬಿನ ಕಿರುಗೆಜ್ಜೆ ಕಟ್ಟಿ, ಸಣ್ಣಕಂದಮ್ಮಗಳ ಕಣ್ಣಕವಡೆಗಳ ಜೋಮಾಲೆ ಧರಿಸಿ, ಬಡವರ ಒಡಲಿನ ಬಡಬಾನಲದ ಪಂಜುಹಿಡಿದು, ಕೂಲಿಕುಂಬಳಿಯವರ ಮೈದೊಗಲಧೂಳಿಯ ಭಂಡಾರ ಹಚ್ಚಿಕೊಂಡು, ಕಾಲಿಗೆ ಬಿದ್ದವರನ್ನು ತುಳಿಯುತ್ತಲಿದ್ದ ಕುರುಡಕಂಚಾಣವನ್ನು ಹೆಗಲಲ್ಲಿ ಎತ್ತುವ ಎತ್ತುಗಡೆ. "ನನಗೆ ಸಾವಿರದಾರಿ ರೆಕ್ಕೆಯಿಲ್ಲದೆ ಹಾರಿ ಎಲ್ಲರೆದೆಯನು ಸೇರಿ ಜೋಣೆಯುತಿಹೆನು. ಜಗದ ಜೀವಿಗಳುರವು ನನ್ನ ಅಂತಃಪುರವು ಅಲ್ಲಿ ಸೂಜಿಗಳಿಂದ ಹೆಣೆಯುತಿಹೆನು. ನನ್ನ ಕುರುಳುಗಳಲ್ಲಿ ಜನರ ಕರುಳುಗಳನ್ನು ಹುರಿಗೊಳಿಸಿ ಹಗ್ಗಗಳ ಹೊಸೆಯುತಿಹೆನು" ಎಂದು ಆಧ್ಯಾತ್ರೆಯಿಂದ ಹೇಳುಕೊಳ್ಳುವ ಸ್ವಯಂವರ ಧನ್ಯೆಯೂ, ಚಿರಂತನ ಕನ್ಯೆಯೂ ಆದ ಚಿಂತೆಯನ್ನು ಚಿತೆಗೊಳಿಸುವ ಪ್ರಯಾಸ.

## ಧರ್ಮಸಂಸ್ಥಾಪನಾರ್ಥಾಯ

ಜಗತ್ತನ್ನು ಬಿಗಿದ ಇಂಥ ದುಶ್ಶಾಸನ ಪಾಶವನ್ನು ಹರಿದೊಗೆಯಲಿಕ್ಕು, ಜಗತ್ತಿನ ಗಂಡಸ್ಥಲಕ್ಕೆ ಇಟ್ಟ ದುರ್ಯೋಧನಾಂಕುಶವನ್ನು ಮುರಿದೊಗೆಯಲಿಕ್ಕು, ಜೀವ ತಿನ್ನುವ ಹಸಿವೆಯನ್ನು ನೆತ್ತರ ನೀರಡಿಕೆಯನ್ನು ಹಿಂಗಿಸಲಿಕ್ಕು ತನ್ನ ಬಿರಿಗಣ್ಣುಗಳನ್ನು ತಾನೇ ಕಿತ್ತುಕೊಂಡ ರುದ್ರ ಮಹಾಕಾಳಿಯ ಪೂಜೆಯಾಗಬೇಕಾಗಿದೆ. ಕಣ್ಣುಗಳಲ್ಲಿ ಆದೋ ಕಕ್ಕಡ ಹೊತ್ತಿಸಿದ್ದಾರೆ! ಕೆನ್ನೀರಿನ ಜಳಕ ಮಾಡಿಸಲಿದ್ದಾರೆ! ರುಂಡದ ಹೂಗಳನ್ನೇರಿಸಿ, ಮದ್ದಿನ ಧೂಪವನ್ನು ಹಾಕಿ, ಗುಂಡಿನ ಗಂಟೆಗಳನ್ನು ಬಾರಿಸಲಿದ್ದಾರೆ. ನೀತಿಯ ಭೂತವೇ ಹೊರಡು! ದಯೆಯ ದೆವ್ವವೇ

ತಳಕಿತ್ತು! ಕರುಳಿನ ಮರುಳೇ ಓಡಿಲ್ಲಿಂದ! ನ್ಯಾಯರಾಕ್ಷಸನೇ ನಿನ್ನ ಕೆಲಸವಿಲ್ಲೇನಿದೆ? "ಮುಪ್ಪಿನ ತಾಯ್ಗಳೇ, ಹೊಟ್ಟೆಯ ಡೊಳ್ಳ, ಮುದಿ ತಂದೆಗಳೇ, ಕೈಕೈ ತಾಳ ಬಡೆಯಿರಿ, ಬಾರಿಸಿರಿ! ಚಿಕ್ಕ ಮಕ್ಕಳೇ ಚೀರು ಸನಾದಿಯ. ಅಕ್ಕತಂಗಿಯರೇ, ಅಳಲಿನ ಕೊಳಲ ಊದಿರಿ ಉಸಿರಿಸಿರಿ! ಮುಂಡೆ ಮೋಚಿದಾ ಹೆಂಡಿರದಂಡೇ, ವಿವಿಧಾಲಾಪ ಪ್ರಚಂಡಪ್ರಲಾಪದ ಓಲಗ ಬಾಜಿಸಿರಿ! ಪಂಚಮರಾದಿ ಪಂಚವರ್ಣವೇ ಪುಟಿಸುಪಾಂಚಜನ್ಯ! ಭೂಮಿತಾಯಿಯೇ ಜ್ವಾಲಾಮುಖದಿಂದೂದು ಶಂಖವನ್ನು!!" ಭೂಲೋಕದಲ್ಲಿ ನಡೆದ ಕಾಳಿಯ ಈ ಪೂಜೆಯ ಕೋಲಾಹಲವನ್ನು ಕೇಳಿ ನಟರಾಜನ ನಾಟ್ಯನಿಲ್ಲುವದು; ಬ್ರಹ್ಮನ ಸಮಾಧಿಯು ಭಂಗಪಡೆಯುವದು; ಹಾಲಿನ ಕಡಲಲ್ಲಿ ಮಲಗಿದ ದೇವನ ನಿದ್ದೆಯು ಹಾಳಾಗಿ ಹೋಗುವದು; ಆ ಮೂವರೂ ತಾವು ರಚಿಸಿದ ಮರಾಬಟ್ಟೆಯ ನಾಟಕವನ್ನು ನೋಡುವರು! ಆಗ ಮುಂದಿನ ಉಪಾಯವನ್ನು ಅವರು ಮಾಡದಿರುವರೇ? ಮಾನವತೆಯು ಮೊಳಗುವ ಕಾಲದಲ್ಲಿ, ನಾಗರಿಕತೆಯು ಬೆಳಗುವ ಕಾಲದಲ್ಲಿ, ಜೀವದಯಾ ಸಂಘದ ಸುಳಿಗಾಲದಲ್ಲಿ, ಕ್ರೈಸ್ತನ ಬೋಧೆಯು ಉಬ್ಬಿಹ ಕಾಲದಲ್ಲಿ, ಶಾಂತಿಪುರಾಣವ ಕೇಳುವ ಕಾಲದಲ್ಲಿ ಇದೇನು ನರಬಲಿ! ನರಮೇಧ!! ಆದರೆ, ಒಳ್ಳೆಯ ಮನಸ್ಸಿನಿಂದ ಹೊಂದುಗೂಡಿಕೆಯ ಧರ್ಮಧ್ವಜವನ್ನು ಸ್ಥಾಪಿಸುವ ಮೊದಲು, ಈ ಕಾಳಿಯ ಪೂಜೆಯು ಆಗಬೇಕಾದುದು ಅನಿವಾರ್ಯ. ಪೂಜೆಯಾದ ಬಳಿಕ ಆಕೆಯ ಬಲಗಾಲ ಬುಡದಿಂದ ಬಿಡುಗಡೆಯು ಬಿಟ್ಟುಬರುವದು. ಆಗ ಮಾನವನು ಈ ಸೀಮೆಯನ್ನು ದಾಟುವನು; ಸಿಮೋಲ್ಲಂಘನ ಮಾಡುವನು. ಅದು ನಿಜವಾದ ದಸರೆ; ಇಲ್ಲದಿದ್ದರೆ ಬರಿ ಹೆಸರೇ! ಆಗ ಕವಿಯ ಹಾಡು ಮಾನವನ ಹಾಡಾಗಿ ಕೇಳಿಸುತ್ತದೆ. "ಎಲ್ಲರೂ ಒಂದಾಗಿ ನಡೆಸು, ನೋಡಿ ನೋಡಿದವರ್ಗೆ ಬನ್ನಿ ಬನ್ನೆನ್ನಿ। ಕೊಡಬನ್ನಿ—ಕೊಳಬನ್ನಿ—ಕೊಡುವೆನೀ ಬನ್ನೀ। ಹಿಂದಿರುವ ಹಗೆಯೀಗ ಅಂಗಾರವಾಯ್ತು। ಒಂದೇ ತಾಯಿಯ ಮಕ್ಕಳಂತೆ ಒಂದಾಗಿ। ಪಡುವಣದ ಶಕ್ತಿಯಲಿ ಮೂಡಣದ ಭಕ್ತಿ। ಹೀಗೆ ಇಡಿಯಾಗೋಣ ಸೀಮೆಯನು ದಾಟಿ." ಮಾನವಮಕ್ಕಳು ಒಂದಾಗಿರುವ ಧರ್ಮವು ಉದಯ

ವಾಯ್ತೆಂದು ಮೊದಲಗಿತ್ತಿಯಾದ ಧರಣೀದೇವಿಯು ಹಿಗ್ಗದಿರುವಳೇ? ಕುನ್ನಿಮಾನವನು 'ದೇಶೋದ್ಧಾರ'ದ ಮಾತುಗಳನ್ನಾಡುವನು; ಆದರೆ ಅದು ಪೊಳ್ಳು ಹರಟೆಯೇ ಸೈ. ಮೊದಲಗಿತ್ತಿಗೆ ಇಚ್ಛೆಯಾದರೆ, ಉದ್ಧಾರಕ್ಕೇನು ತಡ? ಅವಳು "ಹದಿನಾರು ರಾಜರು ತಲೆಕೆಳಗಾದರೂ ತಲೆಯೆತ್ತಿನಿಂತಿರುವಳು:" ಹಾಗೂ, ಅವಳ "ತೇಜದ ಮುಂದೆ ರಾಜತೇಜವು ಕೂಸು; ಆದರೆ ಮೊದಲಗಿತ್ತಿಯು ಮೊದಲಿನಂತೆ ಮೆರೆಯುತ್ತಲೇ ಇದ್ದಾಳೆ. ಅವಳು ಒಕ್ಕುಡಿತೆ ಅರೆಮುಕ್ಕು ಎನುತೆನುತ ಹಲಕೆಲವು ಪಾನಿಪತ್ತುಗಳನ್ನು ಮುಕ್ಕಳಿಸುತ್ತಾಳೆ: ಕೊಡಲಿ ರಾಮನು ಎರೆದ ಕೆನ್ನೀರ ಜಳಕಕ್ಕೆ ಕೂದಲು ನೆನೆಯಲಿಲ್ಲೆನ್ನುತ್ತಾಳೆ: ಅವತಾರಕ್ಕೊಂದೊಂದು ಅಭಿಷೇಕ ಮಾಡಿದರೂ ಎಣ್ಣೆಮಜ್ಜನ ಬೇರೆ ಬೇಕೆನ್ನುತ್ತಾಳೆ: ನೆತ್ತರ ವಿರಾಯಿಸುವ ಕೆಂಜರ ಕೈಯಿಳಿಸಿ ಮೆರೆಯುತ್ತಲೇ ಇರುತ್ತಾಳೆ. ಆದರೆ ಕವಿಯು, ಆಕೆಯೆಂದು ಪ್ರಸನ್ನಳಾದಳೆಂದು ಕಾದಿದ್ದಾನೆ. "ಹಾಲಿನ ಹೃದಯಕ್ಕೆ ಕುಬ್ಬಸವನು ತೊಡಿಸಿ, ಹೂಮುಡಿಸಿಕೊಂಡೆಂದು ನೀ ನಲಿವೆ? ಬಸಿರು ತುಂಬಲು ಹಸಿರುಡುಗೆಯನುಟ್ಟೆಂದು ವನವಾಸ ನವಮಾಸ ತೀರಿಸುವೆ?" ಎಂದು ಕುತೂಹಲ ಪಡುತ್ತಿದ್ದಾನೆ: ಅಂಥ ತಾಯಿಗಿಂತ ಯಾರು ಹೆಚ್ಚು? ಯಾರು ಹೆಚ್ಚು? ಯಾರು ಹೆಚ್ಚು ತಾಯಿಗಿಂತ? 'ತಾಯಿಗಿಂತ ತಾಯಬಾಯಿ!' "ಮಾತ ನಾಡಿ ಮುದ್ದಸಿತ್ತು, ಹಾಡಿನೊಂದು ಗುಟುಕ ಕುಡಿಸಿ, ಕಥೆಯದೊಂದು ಕುಟುಕ ಹಾಕಿ, ನೋಡಲಾಡಲೋಡಕಲಿಸಿ, ಮಾತಿನೊಂದು ಮಂತ್ರದಿಂದ ನಮ್ಮ ದೇಹ ಯಂತ್ರನಡಿಸಿದಂಥ ನಮ್ಮ ತಾಯಬಾಯಿ" ಆ ಬಾಯೊಳಗಿನ ನಾಲಗೆಯೆಂದರೆ ನಾಡನುಡಿ. ಆ ನುಡಿಯನ್ನು ನಲಿಸುವುದೇ. ಕವಿಗೆ ದೇಶ ಪ್ರೇಮದ ಹಾದಿ.

# ೬ ಗದ್ಯದ ಪ್ರಕೃತಿ ಹಾಗೂ ಜೀವ

## ಕಾವ್ಯಕೀರ್ತಿ ಮುಖ

'ಅಂಬಿಕಾತನಯ ದತ್ತ'ರು ಕವಿವರ್ಯರೆಂದು ಕೀರ್ತಿವೆತ್ತಿರುವರು. ಅವರು ಬರೆದಿರುವ ಕವನಗಳನ್ನು ನನ್ನ ಎಣಿಕೆಯಲ್ಲಿ ನಾಲ್ಕು ವಿಭಾಗಗಳನ್ನು ಮಾಡಿ, ಅವುಗಳ ಪರಿಚಯವನ್ನು ಸ್ಥೂಲವಾಗಿ ಹೇಳಿದಂತಾಯಿತು. ಆದರೆ, ಅವರು ಈ ನಾಲ್ಕು ವಿಧದ ಕವಿತೆಗಳನ್ನಲ್ಲದೆ ಕೆಲವು ನಗೆ ಹಾಡುಗಳನ್ನೂ ಅಣಕುಹಾಡುಗಳನ್ನೂ ರಚಿಸಿದ್ದಾರೆ. ನಗೆಹಾಡಿನಲ್ಲಿ "ಅನಿರ್ವಚನೀಯ ಅರ್ವಾಚೀನ ಸೌಂದರ್ಯ"ವೊಂದು. "ಕುರುಡಿರಲಿ ಮೆಳ್ಳಿರಲಿ ಕಪ್ಪು ಕನ್ನಡಕವಿರೆ ನಯನಗಳನೇನು ಬಣ್ಣಿಸಲಿ ಮಣ್ಣು? ಏನು ತಲೆ ಬಣ್ಣಿಸಲಿ ತಿಗಳಿ ಮೇಯುವ ಹೊಲವ ಕಲಸನ್ನು ಕಾಣವೇ ನನ್ನ ಕಣ್ಣು?" ಎನ್ನುವಲ್ಲಿ ಅರ್ವಾಚೀನ ಸೌಂದರ್ಯವು ಬಣ್ಣಿಸಲಿಕ್ಕಾಗದೆ ಅನಿರ್ವಚನೀಯವಾಗಿದೆ. ಅದರಂತೆ ಬಾಯ್ಬಡಕ ಮುದಿಕೆ ಬಯ್ದರೂ ನಗೆ ಬರುತ್ತದೆ; ಅಂಥ ಮುದಿಕೆಯರೂ ಇರಬೇಕು! ಎಲ್ಲಿ? "ನಾಡ ಸಂರಕ್ಷಣೆಗೆ ತೋಪು ಇರದಿರಲು ನಾಡಿಗೊಂದಿರಬೇಕು ಬಯ್ಯುವಾ ಮುದಿಕಿ। ಊರ ಸಂರಕ್ಷಣೆಗೆ ನಾಯಿ ಬರದಿರಲು ಊರಿಗೊಂದಿರಬೇಕು ಬಾಯ್ಬಡಕ ಮುದುಕಿ" ದುಂಡುಮೇಜಿನ ಪರಿಷತ್ತಿನಿಂದ 'ಶೂನ್ಯ ಸಂಪಾದನೆ ಯಾಗಬೇಕಾದರೆ, "ದುಂಡು ಮೇಜಿನ ಸುತ್ತು। ದುಂಡ ದುಂಡ ಮಂದಿ। ದುಂಡ ದುಂಡ ಮಂದೀಗಿ। ಬಂಡೀಗಾಲಿ ಹೊಟ್ಟಿ। ಬಂಡಿಗಾಲಿ ಹೊಟ್ಟೀಗಿ। ಗುಂಡಕಲ್ಲ ತಲೆಯು। ಗುಂಡಗಲ್ಲ ತಲೆಗೆ। ಸೊನ್ನಿಸುತ್ತಿದ ಮೆದುಳು" ಇವೇ ಕಾರಣವೆಂದು ನಗಿಸಿಬಿಟ್ಟಿದ್ದಾರೆ. "ಜೆಕ್ಕು ಹಾರುತಿದೆ ನೋಡಿದಿರಾ?" ಹಾಗೂ "ವರದಾ। ತಗಣಿ ವರದಾ" ಎಂಬ ಅಣಕ ಹಾಡುಗಳು ಅವರ ಸೂಕ್ಷ್ಮತಮವಿಮರ್ಶಕ್ಕೆ ಸಾಕ್ಷಿಯಾಗಿವೆ. ಇವಲ್ಲದೆ, ಜೋಗಿತಿಯ ಹಾಡನ್ನೂ ಜಂಗಮಯ್ಯನ ಹಾಡನ್ನೂ ಬರೆದಿದ್ದಾರೆ. ಕವಿಯಾದ ಅವರು ಕವನಗಳನ್ನಲ್ಲದೆ, ಸಣ್ಣ ಕತೆಗಳನ್ನೂ ಹರಟೆಗಳನ್ನೂ, ಕೆಲವುಹುಚ್ಚಾಟಗಳನ್ನೂ ಬರೆದು ತಮ್ಮ ನಗೆಯ ಭಾಂಡಾರವನ್ನು ಒಡೆದು,

ಸಾಹಿತ್ಯಬೊಕ್ಕಸವನ್ನು ತುಂಬಿದಂತೆ, 'ಸಾಹಿತ್ಯವಿಮರ್ಶೆ' ಯನ್ನೂ. 'ವಿಚಾರಮಂಜರಿ' ಯನ್ನೂ ಬರೆದು ಸಾಹಿತ್ಯಶಾಸ್ತ್ರ'ವನ್ನು ಅಣಿಗೊಳಿಸಿದ್ದಾರೆ. 'ಉಪನಿಷತ್ ರಹಸ್ಯ'ವನ್ನೂ, 'ಭಾರತೀಯ ನವಜನ್ಮ'ವನ್ನೂ, 'ಮೇಘಸಂದೇಶ'ವನ್ನೂ ಕನ್ನಡಿಸಿದ್ದಾರೆ. ಕವಿಗಳ ಗದ್ಯ ನೋಡಬಾರದೆಂದೂ, ಗದ್ಯಲೇಖಕರ ಪದ್ಯ ನೋಡಬಾರದೆಂದೂ ಹೇಳುವ ಮಾತು ಬೇಂದ್ರೆಯವರ ಪೂರ್ತಿ ಸುಳ್ಳು ಅನ್ನಬೇಕು. "ಇವರ ಗದ್ಯ ಅಲಂಕಾರಿಕ ಗದ್ಯ, ಹೃದ್ಯ ಗದ್ಯ, ವಕ್ರೋಕ್ತಿಯರೀತಿ, ಸುಭಾಷಿತಗಳ ಚಮತ್ಕಾರ, ಅನ್ಯೋಕ್ತಿಯ ಬೆಡಗು ಎಲ್ಲವನ್ನೂ ಬಳಸಿಕೊಳ್ಳುತ್ತಾರೆ. ಶ್ಲೇಷವಂತೂ ಶೈಲಿಯ ಗುಣವಲ್ಲ, ಮನೋಧರ್ಮವೆನ್ನುವಷ್ಟು ವಿಪುಲವಾಗಿದೆ" ಯೆಂಬ ಶ್ರೀ. ಮಹಿಷಿಯವರ ಅಭಿಪ್ರಾಯವು ಎಲ್ಲರೂ ಒಪ್ಪುವಂತಿದೆ. ಅವರು ಬರೆದ ಕತೆಗಳು ತೀರ ಸ್ವಲ್ಪ. ಆದರೇನು? 'ಮಗುವಿನ ಕರೆ' ಎಂಬುದೊಂದೇ ಅವರನ್ನು ಕತೆಗಾರರನ್ನಾಗಿ ಮಾಡಬಲ್ಲದಂತೆ; ಅದರಿಂದ ಅವರನ್ನು ಹುಟ್ಟುಕತೆಗಾರರೆನ್ನಲೂ ಅಡ್ಡಿಯಿಲ್ಲವಂತೆ. ಅದು ಕತೆಗಾರ ಬರೆದ ಕತೆಯಲ್ಲವೆಂದೂ, ಕವಿಬರೆದ ಕತೆಯೆಂದೂ ಹೇಳುತ್ತಾರೆ. ಬೇಂದ್ರೆಯವರ ಮಾತಿನಲ್ಲಿ ಅದಕ್ಕೆ ಕಾವ್ಯ ಕೀರ್ತಿಮುಖ ಕಟ್ಟಿಕೊಂಡ ಕತೆಯನ್ನಬೇಕು. ಅವರ ಕತೆಗಳನ್ನು ನೋಡಿ, ಎಲ್ಲ ಬಿಟ್ಟು ಕತೆಗಳನ್ನೇ ಬರೆಯಲೆಂದು ಹಾರಯಿಸುವವರಿದ್ದಾರೆ. ಬೇಂದ್ರೆಯವರು ಸಣ್ಣ ಕತೆಗಳ ವಿಷಯವಾಗಿ ಹೇಳುವುದೇನಂದರೆ—"ಸಣ್ಣ ಕತೆಯು ಅಲ್ಪ ಜೀವಿಗಳ ಮಹಾಕಾವ್ಯ. ಸಾಮಾನ್ಯವಾಗಿ ಎಲ್ಲರ ಜೀವನದಲ್ಲಿ ಬಂಗಾರದ ಕಣಗಳು ಕಡಮೆ, ಉಸುಬಿನ ವಿಸ್ತಾರವು ಹೆಚ್ಚು. ಈಷನ್ಮಾತ್ರವಾದ ಆತ್ಮಲೀಲೆಯ ಚಾರಿತ್ರ್ಯಕ್ಕೆ ಸಣ್ಣಕತೆಯು ದೊಡ್ಡ ಸಾಧನವಾಗಿದೆ. ಮಹಾತ್ಮರೆಂಬುವರ ಚರಿತ್ರೆಯೂ ಆಮೂಲಾಗ್ರವಾಗಿ ಮಹತ್ವವುಳ್ಳದ್ದಾಗಿರುವದಿಲ್ಲ; ಅಲ್ಪರ ಚರಿತ್ರೆಯನ್ನು ಕೇಳುವದೇನು ಎಂದೆನ್ನಲಾಗದು. ಅಕಸ್ಮಾತ್ತಾದ ಆತ್ಮದರ್ಶನದಂತೆ, ಅಕಲ್ಪಿತ ಅಧಃಪತನವೂ ವಿಚಾರಣೀಯವಾಗಿದೆ. ಅದು ಸಣ್ಣಕತೆಯ ವಸ್ತು." ಸಣ್ಣಕತೆಯ ವಸ್ತುವಿನ ಮಾತಾದ ಮೇಲೆ ಅದನ್ನು ಕಾಣುವ ಬಗೆ ಹೇಗೆ? "ಗುಣವನ್ನು ಗುರುತಿಸುವ ಶಕ್ತಿಯು ಸ್ಥಿರವಾಗಿ ಬೆಳೆದಂತೆ ಪರಹಿತಸುಖದುಃಖಗಳಿಗೆ ಅಂತಃ

ಕರಣವು ಅನುಕೂಲವಾಗಿ ಸತ್ವವು ಪ್ರಬಲವಾದಂತೆ ಅಲ್ಪರಲ್ಲಿಯೂ ನಡೆವ ಆತ್ಮನ ವಿರಾಟನಾಟ್ಯವೂ ಮನಸ್ಸಿಗೆ ಗೋಚರವಾಗುವದು." ಈ ಗುಣವನ್ನು ಬೆಳೆಸಿಕೊಳ್ಳುವ ರೀತಿಯೂ ಇದೆಯಂತೆ. ಅದೇನೆಂದರೆ— "ಪರಗುಣಕಥನರೀತಿಯಿಂದ ಸ್ವಭಾವಗುಣವೂ ವಿವರ್ಧನವಾಗುವದು." ಇನ್ನು, ಕತೆಗಾರನ ಕರ್ತೃವ್ಯವೇನೆಂದರೆ—"ಅವನು ಕತೆಯ ಮುಖವಾಗ ಬೇಕಲ್ಲದೆ, ಕತೆಗಾರನ ಕೈಯಲ್ಲಿ ಕತೆಯೊಂದು ಕತ್ತಿಯಾಗಬಾರದು." ಈ ಮೂಲ ಮಾತುಗಳ ಕಿರಣಗಳ ಬೆಳಕಿನಲ್ಲಿ ಅವರ ಕತೆಯನ್ನು ಕಾಣ ಬೇಕು. ಅಂದರೆ ಅವರ 'ಮಂಗಾಟ' ತಿಳಿಯುವದು; ಅವರ 'ನಾಸ್ತಿಕ' ನಾರಾಯಣರಾಯರು ಗೋಚರಿಸುವರು. 'ಏಕಾಕಿನಿ'ಯ ಹತಭಾಗ್ಯವು ಕಣ್ಮುಂದೆ ಬರುವದು; ''ಪಾಲಾ ಫ್ಲೂ''ವಿನ ಫೂತ್ಕಾರದ ವಿಷಫಲವು ಕಂಡು ಬರುವದು.

## ಮಾತಿನ ಮುರಿ

'ಕೊಂಕುವೆತ್ತ ಪೊಸಮಾತು ನೇರವಾಗಿ ಎದೆಯನ್ನು ಸೇರುವದು' ಎಂಬ ಮಾತು ಹಳೆಯದಾದರೂ ಅದರ ಹುಳಿಹೋಗಿಲ್ಲ. ವಕ್ರೋಕ್ತಿಯನ್ನಾಡ ಹೋಗುವಷ್ಟರಲ್ಲಿ ತೀರ ವಕ್ರವಾದರೆ ಅರ್ಥವು ಶೂನ್ಯವಾಗುವ ಭಯ ಹೆಚ್ಚು. ಬೇಂದ್ರೆಯವರ ಹರಟೆಗಳಲ್ಲಿಯೂ, ನಾಟಕಗಳಲ್ಲಿಯೂ, ಇರುವಂತೆ ಗಂಭೀರ ವಿಷಯಗಳಾದ ಕಾವ್ಯವಿಚಾರ–ವಿಮರ್ಶೆಗಳಲ್ಲಿ ಅವರ ಮಾತಿನ ಮುರಿಯು ಬಹಳ. ಅದನ್ನು ಅಗಿದು ನುಂಗುವುದು ಬಿಗಿಯಾದಂತೆ, ಅದು ಮುರಿತುಹೋಗುವುದೂ ಅಷ್ಟೇ ಬಿಗಿ. "ಜೀವನವಾದರೂ ಸತ್ಯಸೌಂದರ್ಯ ಸುಖವನ್ನೇ ಭಜಿಸುವದು. ಜೀವನವು ಅರ್ಥಸೃಷ್ಟಿ; ಸಾಹಿತ್ಯವು ಶಬ್ದಸೃಷ್ಟಿ'' ಎನ್ನುವಲ್ಲಿಯೂ, ರಾಮಾಶ್ವಮೇಧವು ನಮ್ಮ ಜನರಿಗೆ ನೀರೂ ಅಲ್ಲ, ಕಡಬೂ ಅಲ್ಲ, ಕಲ್ಲಾಗಿದೆ—ಶಬ್ದಪರಿಚಯ ವಿಲ್ಲದ ಮೂಲಕ. ಓದುಗೇಳದಕ್ಕರಗಿವುಡಪು ಆಗಬಾರದು ಕನ್ನಡಿಗರು'' ಎನ್ನುವಲ್ಲಿಯೂ, ''ಕರ್ತವ್ಯದ ಕಾಟವನ್ನಾಗಲಿ, ಕಿಂಕರ್ತವ್ಯ ಮೂಢರ ಕಾಟವನ್ನಾಗಲಿ ತಪ್ಪಿಸಿಕೊಳ್ಳುವದಿದ್ದರೆ ಮಾನಪತ್ರಗಳನ್ನು ಕೊಡುವದೊಂದೇ ಶಿಷ್ಟಸಮ್ಮತ ಮಾರ್ಗ" ಎನ್ನುವಲ್ಲಿಯೂ, '' ಈಗಿನ ಕಾಲ

ಸ್ವಲ್ಪ ತಿರುಗುಮುರುಗು; ಬುಡಮೇಲಾದ ಕಾಲ. ಹಿಂದಿನವರು ಹಾಲಿನಲ್ಲಿ ನೀರು ಬೆರಸಿ ಕುಡಿದರೆ, ಇಂದಿನವರು ನೀರಿನಲ್ಲಿ ಸ್ವಲ್ಪ ಹಾಲು ಬೆರಸಿ ಕುಡಿಯುವರು" ಎನ್ನುವಲ್ಲಿಯೂ ಅವರ ಮಾತಿನ ಮುರಿಯು ರೀತಿಯನ್ನು ತುಸು ಅರಿತುಕೊಳ್ಳಬಹುದು. 'ಕೈಲಾಗದ ಕವಿಯು ಸಿಟ್ಟಿಗೆದ್ದು ತೀವ್ರ ವಿಮರ್ಶಕನಾಗುವಂತೆ.

ಇಲ್ಲಿ ಒಂದು ಮಾತನ್ನು ಆಲಿಸುವ. ಅದೇನಂದರೆ—''ಜೀವನದಲ್ಲಿ ಸಾರ್ಥಕತೆಯನ್ನು ಕಾಣದೆ ಒಳ್ಳೊಳ್ಳೆ ಕನಸುಗಳನ್ನಾದರೂ ಕಂಡೇವೇ ಎಂದು ಆಶಿಸುವ ಆಶೆಬಡಕರೂ ಇದ್ದಾರೆ. ಇಂಥವರಿಗೆ ಒಳ್ಳೇಕನಸುಗಳು ಪುಕ್ಕಟೆ ನೋಡಿದ ಸಿನೇಮಾ-ನಾಟಕಗಳಂತೆ. ಅಂಕೆಗಳಿಗೆ ದೈವವನ್ನು ತೂಗುಹಾಕಿದ ಲಾಟರೀ ಮೂಢರು, ಗ್ರಹಗಳಿಗೆ ಜೋತುಬಿದ್ದ ದೈವ ಪರವಶರು, ಚಕ್ರಬಂಧ ಒಗಟುಗಳ ವ್ಯೂಹದಲ್ಲಿ ಲಕ್ಷ್ಮಿಯ ಹೆಜ್ಜೆಯನ್ನು ಹುಡುಕಾಡುವ ಅಭಿನವ ಶಬ್ದ ಭಕ್ತರು. ಇವರೆಲ್ಲರೂ ಕನಸಿನ ಅಂಜನದಿಂದ ಜೀವಿತದ ನಿಧಿಯನ್ನು ಕಂಡುಕೊಳ್ಳಬೇಕೆನ್ನುವ ಹುಟ್ಟುಮರುಳರ ಜಾತಿಯವರೇ ಸೈ.'' ಇದರಲ್ಲಿ ಮಾತಿನ ಮುರಿ ಬೇಕೆ? ರೀತಿಯ ಮುರಿ ಬೇಕೆ?

## ಪಾತಾಳಗರಡಿ

ಪದ್ಯದಲ್ಲಾಗಲಿ, ಗದ್ಯದಲ್ಲಾಗಲಿ ಶಬ್ದವೊಂದೂ ಕಠಿಣವಿರುವದಿಲ್ಲ, ಶಬ್ದಗಳ ಸಂಖ್ಯೆ ಸಹ ತೀರ ಕಡಿಮೆ; ಮಾತು ತೀರ ಹೊಸಗನ್ನಡ. ಹೀಗಿದ್ದರೂ ವಿಚಾರ ಬಹಳ ಗುಂಭ. ಅದು ಪಾತಾಳಗರಡಿಗೂ ಸಿಗದೆ ಹೋಗುತ್ತದೆ. ''ಅ'ಕಾರವು ನಾದಮಯ ಜಗತ್ತಿನ ಮೂಲವಿದ್ದಂತೆ, ಅಪ್ಪ, ಅವ್ವ, ಅಜ್ಜ, ಅಮ್ಮ, ಅತ್ತಿಗೆ, ಅಬಚಿ, ಅತ್ತೆ, ಅಕ್ಕ, ಅಣ್ಣ ಈ 'ಅ' ಕಾರದ ಬಳಗವು ಜೀವಮಯ ಜಗತ್ತಿನ ಮೂಲವಿದೆ.'' ಇನ್ನೊಂದು ಉದಾಹರಣೆಯಾಗಿ—''ಅಸಿವಸಿಯ ರಸಕಸಿಯೇ ಹೆಚ್ಚಾಗಿ ಮಾತಿನ ಸುಳುವು ಹಾವಸೆಯ ಜಾರಿಕೆಯಾಗಿ, ಮಹಾಕಾವ್ಯದ ನೆನಪು ಹಾರಿ ಬಯಲಾಟದ ನೆನಪಾಗುವದು." ಎಂಬ ವಾಕ್ಯವನ್ನು ಹೇಳಬಹುದು. ಆದರೆ ಪರಿಚಯವು ಹೆಚ್ಚಾಗುತ್ತ ಹೋದಂತೆ ಇಂಥ ಮಾತುಗಳಿಲ್ಲ

ಸಹಜವಾಗಿ ಅರ್ಥವಾಗುತ್ತ ಬರುವವಲ್ಲದೆ, ಅದರಲ್ಲಿ ಹೆಚ್ಚು ಸ್ವಾರಸ್ಯವನ್ನೂ, ಆಳವಾದ ವಿಚಾರವನ್ನೂ ಕಂಡು ಅತ್ಯಂತ ಆನಂದವಾಗುವದು. "ಶ್ರೀ. ಬೇಂದ್ರೆ ಅವರು ಶುದ್ಧ ಚಿನಿವಾಲನಂತೆ ತೂಕಹಾಕಿ ತೂಗಿ ತೂಗಿ ಮಾತನಾಡುವರು. ಒರೆಗೆ ಹಚ್ಚಿ ಕೊರೆದುಕೊರೆದು ಸರಿತೋರಿದ್ದನ್ನು ಸರಿಯಾಗಿ ಸೂತ್ರರೂಪದಲ್ಲಿ ಶಕ್ಯವಿದ್ದಷ್ಟು ಕಿರಿದರಲ್ಲಿ ಹೇಳುವರು; ಅರ್ಥವನ್ನು ತುಂಬಿತುಂಬಿ ಹೇಳುವ ಸೊಗಸು ಅವರದೇ ಸರಿ. ಈ ಅರ್ಥಗಾಂಭೀರ್ಯವು ಅವರ ಗುಣವೂ ಆಗಿದೆ; ದೋಷವೂ ಆಗಿದೆ."

## ನಗೆಯ ಹುತ್ತ

ಅವರ ವಿಚಾರಗಳು ಪಾತಾಳಗರಡಿಗೂ ಹತ್ತದಂತೆ ಆಳವಾಗಿರಬಹುದು; ಇಲ್ಲವೆ, ಆಕಾಶದ ಬಯಲಲ್ಲಿ ಹಾರಿ ಸೀಲಿಯಲ್ಲಿ ಲೀನವಾಗಬಹುದು. ಆದರೆ ಮಾತು ಮಾತನ್ನು ಕಾವ್ಯಮಾಡುವ ಶಕ್ತಿಯು ಅವರಲ್ಲಿದೆ. ನುಡಿನುಡಿಗೂ ನಗೆಯಿಂದ ಬೆಡಗುಗೊಳಿಸುವ ಬಿನ್ನಾಣವಿದೆ. ನಗೆಯುಮ್ಮೈಯನ್ನೇ ತಳೆದು ಬಂದ ಅವರ ಹರಟೆ. ನಾಟಕಗಳುಂಟು. ಒಬ್ಬರು ಹೇಳುವಂತೆ ಬೇಂದ್ರೆ ಅವರು ಕೊಂಕು ಆಡಿದರೂ, ಸರಳವೆಂದು ಭ್ರಮೆಗೊಳಿಸುವಂತಿರುವದು 'ಮಾತರಿವರೆಂ'ಬುವರ ಕುರುಹು. "ನಗೆಯೊಂದು ಬೇಕು. ಹೂವಿಗಿಂತ ಹಗುರಾದರೂ ನಗೆಯು ವಜ್ರಾಯುಧಕ್ಕಿಂತಲೂ ಬಿರುಸು. ಎಲ್ಲರೂ ತಮ್ಮ ಕೂಡ ನಗಬೇಕು; ತಮ್ಮ ಕಂಡು ನಗಬಾರದೆಂದು ಎಚ್ಚರಪಡುತ್ತಾರೆ. ನಗೆ ಎರಡು ಬಗೆ. ಒಂದು ಕೊಲ್ಲುವುದು ಒಂದು ಕಾಯುವುದು. ಒಂದು ವಿಷ, ಒಂದು ಅಮೃತ. ಅಮೃತನಗೆಯು ಲೇಸುನಗೆ, ರಸನಗೆ; ವಿಷನಗೆಯು ಹೇಸಿನಗೆ, ರಸಾಭಾಸ. ನಗೆಯು ಬಡವ ಬಲ್ಲಿದನೆಂಬ ಭೇದವಿಲ್ಲದೆ ಎಲ್ಲರನ್ನೂ ಸಿಂಗರಿಸುವ ಒಡವೆ, ತಣಿಸುವ ವಸ್ತು. ಒಟ್ಟು ನಗೆಯು 'ಮನುಷ್ಯಸ್ವಭಾವ. ಮುಗುಳುನಗೆಯು ಹುಡುಗರ ಹುಟ್ಟುಗುಣ; ಹರೆಯದವರ ಸಿಂಗಾರ; ಮುಕ್ತರ ಸಿದ್ಧಿ; ರಸಿಕರ ಸಾಧನೆ; ದೇವನ ಕುರುಹು. ಹೂನಗೆಯು ಸರಸದ ಮುಗುಳು; ಸಾಹಿತ್ಯದ ಪ್ರಾಣ; ವಾದವಿನೋದದ ಜೀವಾಳ; ನಗೆಯಾಟವು ವೀರರ ಶಸ್ತ್ರ; ಬಿರುಸುನಗೆ ಧೂರ್ತರಕೈದು; ಕೆಲೆವರ ನಗೆ

ಹುಡುಗರ ಹುಡುಗಾಟ; ಹುಚ್ಚುನಗೆ ಹುಂಬರ ವಿಲಾಸ; ನಗದೆ ನಗಿಸು
ವದು ಚತುರರ ರೀತಿ; ನಕ್ಕು ನಗಿಸುವುದು ವಿದೂಷಕನ ಪರಿಹಾಸ;
ನಗೆಗೀಡಾಗುವದು ಎಬಡರ ಹಾಡಿ; ಮೂರು ಸಲ ನಗುವದು ಮಂದರ
ಕತೆ." ನಗೆಯ ಶಾಸ್ತ್ರವನ್ನು ಸಹ ನಗಿಸುತ್ತಲೇ ಹೇಳಿರುವದಕ್ಕೆ ಒಂದು
ಮಾತೆಂದರೆ ಬದುಕಿನೂಟದಲ್ಲಿ ಉಪ್ಪಿನಕಾಯಿ. ಆದರೆ ಮಂದಿಯ
ಕೇಡಿನಲ್ಲಿ ಪಾಡುಕಾಣುವ ಹೇಸಿ ನಗೆಯೇ ಇಂದಿನ ಉಪ್ಪಿನಕಾಯಿ.
ಊಟಕ್ಕೆ ತಕ್ಕ ಉಪ್ಪಿನಕಾಯಿ!". ಇಲ್ಲಿ ಮಾತಿನ ಚಾತುರ್ಯಕ್ಕೆ ನಗ
ಬೇಕೋ, ವಿಚಾರದ ವೈಚಿತ್ರ್ಯಕ್ಕೆ ತಲೆತೂರಿಸಿಕೊಳ್ಳಬೇಕೋ, ಕೊಟ್ಟ
ಏಟಿಗೆ ನರಳಬೇಕೋ ತಿಳಿಯುವದಿಲ್ಲ.

## ಗಾಳಿಗಿಂತ ಹಗುರು

ಗಾಳಿಯು ಹಗುರುತನದಲ್ಲಿ ಹಿರಿಮೆಪಡೆದಿರುವಂತೆ, ಅದರಿಂದಲೇ
ಅದು ಕೈಗೆ ಸಿಗದಂತೆಯೂ ಆಗಿದೆ. ದತ್ತ ಸಾಹಿತ್ಯವು ಹಗುರವೇನೋ
ಸರಿ; ಆದರೆ ಅವನ್ನು ಹಿಡಿದಿಟ್ಟುಕೊಳ್ಳುವುದು ಮಾತ್ರ ಬಿಗಿಯೆಂದು
ಬಹು ಜನ ವಾಚಕರು ಹೇಳುತ್ತ ಬಂದಿದ್ದಾರೆ. ಹಿಂದೆ 'ಸ್ವಧರ್ಮ'ದಲ್ಲಿ
ಅವರ ಕವಿತೆಗಳು ಪ್ರಕಟವಾಗುತ್ತಿರುವಾಗ, ಅವು ತಿಳಿಯಲೊಲ್ಲವೆಂದು
ಬೊಬ್ಬಾಟ ಬಂದಿತು: ಅದಕ್ಕೆ ಅವರೇ 'ಸವಿ'ಯನ್ನು ಗದ್ಯದಲ್ಲಿ ಬರೆಯ
ಹತ್ತಿದರು. "ಕವಿತೆಗಿಂತ ಸವಿಯೇ ಹೆಚ್ಚು ಬಿಗಿಯಾಗಿದೆ" ಎಂದು ತಕ
ರಾರುಗಳು ಬರಹತ್ತಿದವು. ಆ ಮಾತಿಗೆ "ಸವಿಯನ್ನೇ ಮೊದಲಿಗೆ ಓದಿ,
ಕವಿತೆಯನ್ನೆ ಹಿಂದುಗಡೆ ಓದಿರಿ" ಎಂದು ಮಾರು ಹೇಳಿದರು. ಆ ಮಾತು
ಬೇರೆ. ಅಂತೂ ಅವರ ಪದ್ಯವೇ ಆಗಲಿ, ಗದ್ಯವೇ ಆಗಲಿ, ಬಿಗಿಯನ್ನು
ವುದು ವಾಡಿಕೆ. 'ನೋವಿನ ಬೆಲೆ' ಎಂಬ ಪ್ರಬಂಧದಲ್ಲಿ—"ಒಂದು
ನೋವಿಗೆ ಹಲವೊಂದು ಹೆಸರಿರುವವು. ತಿಳಿವಿನ ನೋವಿಗೆ ತಪ್ಪೆಂದೂ,
ನುಡಿಯ ನೋವಿಗೆ ಹುಸಿಯೆಂದೂ, ನಡೆಯ ನೋವಿಗೆ ಕೇಡೆಂದೂ,
ಎದೆಯ ನೋವಿಗೆ ದುಗುಡೆಂದೂ, ಒಗೆತನದ ನೋವಿಗೆ ಹಗೆತನವೆಂದೂ
ಹೆಸರುಂಟು" ಎಂಬ ಸಾಲುಗಳಿವೆ. ಈ ಮಾತುಗಳು ಗಾಳಿಗಿಂತ ಹಗು
ರೆಂದು ಯಾರಾದರೂ ಒಪ್ಪುವಂಥವಿವೆ; ಅಷ್ಟೇ ಅಲ್ಲ ಬೆಳಕಿಗಿಂತ

ಬೆಳ್ಳಗೂ ಅವೆ. ಗದ್ಯಸಾಹಿತ್ಯವೆಲ್ಲವೂ ಇಂಥ ಹಗುರಾದ ಮಾತಿನಲ್ಲಿಯೇ ಹೆಣೆಯಲ್ಪಟ್ಟಿದೆ. ಆಧುನಿಕ ಅತ್ಯಂತ ಶ್ರೇಷ್ಠವಾದ ವಿಶ್ವಸಾಹಿತ್ಯದ ವಿಚಾರಗಳನ್ನು, ಆನಂದವನ್ನು ಇಂಥ ತಿಳಿಯಾದ ಕನ್ನಡದಲ್ಲಿಯೇ ಉಸುರುವ ಸವಿನುಡಿಯನ್ನು ವಾಚಕರು ಕೈಮುಟ್ಟಿ, ಮನಮುಟ್ಟಿ ಅವ ಲೋಕಿಸಿದರೆ, ಆ ಸಾಹಿತ್ಯದ ಸಾರ್ಥಕವಾಗದೆ ಇರುವದೇ ?

## ದೇಶಿಯ ನೆರಳು

"ನಮ್ಮ ಜೀವನವು ಕನ್ನಡವಾದರೆ ನಮ್ಮ ಸಾಹಿತ್ಯವು ಕನ್ನಡಿ ಯಾಗುವುದು." ಕನ್ನಡ ಜೀವನವು ಹಳ್ಳಿಗಳಲ್ಲಿ ಹೆಂಗಸರಲ್ಲಿ ಕಂಗೊಳಿ ಸುತ್ತಿದೆ; ಆ ಜೀವನದ ಕನ್ನಡವೇ ಅವರ ಸಾಹಿತ್ಯದ ಕನ್ನಡಿಯಾಗಿ ಸುಲಭವಾಗಿದೆ. ಆ ಕನ್ನಡಿಯ ಸಾಹಿತ್ಯವನ್ನೂ, ಕನ್ನಡದ ಜೀವನ ವನ್ನೂ ಒಳಹೊಕ್ಕು ನೋಡುವ ಕವಿ, ಬಂಡು ಸವರಿದ ತುಂಬಿಯಂತೆ ಅವರ ಮಾತು, ರೀತಿಗಳೆಲ್ಲವೂ ದೇಶಿಯ ಕಳೆಯಿಂದ ಅಲಂಕೃತವಾಗಿವೆ. ಅವರು ನಿಜವಾಗಿ ವಿದ್ವಾನರು; ಪಂಡಿತರು. ಆ ವಿದ್ವತ್ತೆ, ಆ ಪಾಂಡಿತ್ಯ ಅವರಲ್ಲಿ 'ಮಾರ್ಗ'ದ ಪರಿಚಯವನ್ನು ಮಾಡಿಕೊಟ್ಟಿರಲು ಸಾಕು. ಹಾಗಿದ್ದರೂ ಅವರು ಕನ್ನಡದ ಜೀವಾಳವಾದ 'ದೇಶಿ'ಗೆ ಕೈ ಹಾಕಿದರು; ಪ್ರತಿ ಒಬ್ಬರಿಗೆ ಜಗತ್ತಿನ ಸಂಬಂಧವುಂಟಾಗಿರುವ ಈ ಕಾಲದಲ್ಲಿ 'ದೇಶಿ' ಯನ್ನು ಬದುಕಿಸಿಕೊಂಡರೆ, ಕನ್ನಡಿಗರು ಸಾಯಲಾರರು. 'ದೇಶಿ' ಯೆಂಬುದು ಪಾಚಕ ಶಕ್ತಿ; ದೀಪಕ ಶಕ್ತಿ; ವೀರ್ಯ. "ಕನ್ನಡವನ್ನು ಬೆಳೆಸುವ ಆಹಾರವನ್ನು ಹೊರಗಿನಿಂದ ತೆಗೆದುಕೊಳ್ಳಬಹುದು; ಪಾಚಕ ಶಕ್ತಿಯನ್ನೂ, ದೀಪಕ ಶಕ್ತಿಯನ್ನೂ, ವೀರ್ಯವನ್ನೂ ಇನ್ನೊಬ್ಬರಿಂದ ಕಡ ತರಲಾದೀತೇ?" ಎಂದು ಕೇಳುತ್ತಾರೆ. ಎಲ್ಲ ಕಲಾ ಕೃತಿಗಳಲ್ಲಿರುವ ಕಲೆ, ಜಗದ ವಿಜ್ಞಾನ, ಕೃತಿದ್ರವ್ಯವಾದ ವಸ್ತುಗಳನ್ನು ಅವರು ಹೇಗೆಯೇ ಗಳಿಸಲೊಲ್ಲರೇಕೆ; ಎಲ್ಲಿಂದಲೇ ಗಳಿಸಲೊಲ್ಲರೇಕೆ; ಪ್ರತಿಭೆ ಮಾತ್ರ ಅವರ ಸಹಜಾತವಾಗಿದೆ. ಅವರ ಪ್ರತಿಭೆ ಪಡೆದ ಕವನಕೃತಿಗಳೆಲ್ಲ 'ದೇಶಿ'ಯ ಸಂಸ್ಕಾರವನ್ನು ಪಡೆದದ್ದು ಸ್ಪಷ್ಟವಾಗಿ ಕಂಡು ಬರುತ್ತದೆ. "ನಾರೀ ನಿನ್ನ ಮಾರೀ ಮ್ಯಾಗ ನಗೀನವಿಲು ಆಡತಿತ್ತs" ಎನ್ನುವಾಗಲೂ, "ಹೆಜ್ಜ್ಯಾಕ

ಗೆಜ್ಯಾಕ ತಾಳ್ಯಾಕ ತಂತ್ಯಾಕ ಹಾಂಗೊಮ್ಮೆ ಹೀಂಗೊಮ್ಮೆ ಕುಣಿಯೋಣು"
ಅನ್ನುವಾಗಲೂ ಛಂದಸ್ಸಿನ ಗತಿ ಮೊದಲಾದವುಗಳೆಲ್ಲ 'ದೇಶಿ'.
ಬೇಂದ್ರೆ ಕವಿಗೆ ಛಂದಸ್ಸೂ ಗೊತ್ತಿಲ್ಲ ವ್ಯಾಕರಣವೂ ಗೊತ್ತಿಲ್ಲ" ಎನ್ನುವ
ದನ್ನು ಕೇಳಿರ ಬಹುದು; ಇವರ ಕವನದ ಕುಣಿಕುಣಿವ ಹೆಜ್ಜೆಯಿಂದ
ಕನ್ನಡಕ್ಕೊಂದು ಹೊಸ ಛಂದೋಗತಿ ಉಂಟಾಗಬಹುದು; ಅಡಿ ಅಡಿದ
ಹೊಳವು ಕನ್ನಡ ನುಡಿಯ ಕಟ್ಟನ್ನು ಬಿಡಿಸಬಹುದು. ಪದ್ಯದಲ್ಲಿರುವಂತೆ
ಗದ್ಯಸಾಹಿತ್ಯವಾದ ಕತೆ, ಹರಟೆ, ನಾಟಕಗಳಲ್ಲಿಯೂ ಅವರ 'ದೇಶಿ'
ಯನ್ನು ಕಾಣಬಹುದು. ಅವರು ಮಾತಿನಲ್ಲಿ, ಬರವಣಿಗೆಯಲ್ಲಿ ತೂಗಿ
ತೂಗಿ ಶಬ್ದ ಬಳಸುವವರೆಂದು ಹೆಸರಾಗಿದ್ದಾರೆ; ಅವರ ಆ ವ್ರತವು
ಸಾಗಬೇಕಾದರೆ, ಬುನಾದಿಯಿಂದಲೂ ಕನ್ನಡದಲ್ಲಿ ಆ ತರದ ಸಾಗುವಳಿ-
ಯಾದ ಮಾತುಗಳನ್ನು ದೊರಕಿಸಿಕೊಳ್ಳದೆ ನಿರ್ವಾಹವೇ ಇಲ್ಲ. ಹಳೆಯ
ಸಾಹಿತ್ಯದಿಂದಲೂ, ಜನರ ರೂಢಿಗನ್ನಡದಿಂದಲೂ ಅವನ್ನು ದೊರೆಕಿಸಿ
ಕೊಳ್ಳುವುದು ಸಾಧ್ಯ.

**ಕಿರಿಮಾತು–ಕಿವಿಮಾತು**

ಮೊದಲಿನಿಂದಲೂ ಅವರು ಸರ್ವಜ್ಞನನ್ನು ಪ್ರೀತಿಸುತ್ತಿದ್ದುದ
ರಿಂದಲೂ, ಅಪರಾಧಿಯ ಪರವಾಗಿ ಸಾಕ್ಷಿದಾರನಂತೆ ಎಚ್ಚರದಿಂದ
ಮಾತನಾಡುವ ಪ್ರವೃತ್ತಿಯಿರುವದರಿಂದಲೂ ಕಿರಿದರಲ್ಲಿ ಹಿರಿದರ್ಥವಾಗು
ವಂತೆ ಬರೆಯಬಲ್ಲರು; ಮಾತಾಡಬಲ್ಲರು. ಅವರ ಕವನಗಳಲ್ಲಿ ಈ
ಮಾತನ್ನು ನಾವು ಅಡಿಗಡಿಗೆ ಮನಗಾಣಬಹುದು; ಅದರಂತೆ, ಅವರ
ಸರಳವೆನಿಸುವ ಗದ್ಯದಲ್ಲಿಯೂ ಅವನ್ನು ಕಾಣಬಹುದು. ಕಿರಿಮಾತು
ಒಮ್ಮೆ, ಕೇಳಿದರೆ ಬಹಳ ದಿವಸ ಮರೆಯಲಾರವಾದುದರಿಂದ ಅವು ಕಿವಿ
ಮಾತುಗಳೂ ಸರಿಯೇ. ಅವರ ಕೃತಿಗಳು ಮುಗಿಲಿನಂಗಣದಲ್ಲಿ ಥಳಥಳಿ
ಸುವ ಚಿಕ್ಕೆಗಳಂತೆ ಒಂದೇ ಪಾತಳಿಯಲ್ಲಿ ಕಂಡರೂ, ನಮಗೂ ಚಿಕ್ಕೆ
ಗಳಿಗೂ ಇರುವ ಅಂತರವನ್ನು ಅಳೆಯಲಿಕ್ಕಾಗದು; ಅದರಂತೆ ಚಿಕ್ಕೆ–
ಚಿಕ್ಕೆಗಳ ನಡುವಿನ ಅಂತರವೂ ಅಗಾಧವಾದದ್ದು. ಚಿಕ್ಕೆಗಳು ಕಣ್ಣಿದ್ದವ
ರಿಗೆಲ್ಲ ಕಾಣಿಸುವವು; ಗಾತ್ರ ಚಿಕ್ಕದಾಗಿ ತೋರುವ ಯಾವ ಚಿಕ್ಕೆಯೂ

ಚಿಕ್ಕದಾಗಿಲ್ಲವೆಂಬುದು ಅರಿತ ವಿಷಯ. ಕಣ್ಣಿಗೆ ಕಟ್ಟುವಂತೆ ಮಿಣುಕುವ ಪಲ್ಲದೆ, ಕಣ್ಕಟ್ಟು ಅಲ್ಲ. "ಗತಿಸಿದ ಸಂಸ್ಕೃತಿಗಳು ಮಾನವಜಾತಿಗೆ ಜಿಜ್ಞಾಸೆಯೆಂಬುದನ್ನು ವರವಾಗಿತ್ತಿವೆ; ಮುಂದಿನ ದಿವ್ಯ ಜೀವನದಲ್ಲಿ ಜೀವನಜಿಜ್ಞಾಸೆಯೊಂದು ಸ್ಥಾಯೀ ಭಾವ." ಅವರ ಸ್ಥಾಯಿಭಾವವು ಪರಿಪಾಕಹೊಂದಿ, ಮಹಾಜೀವನವನ್ನು ಪಡೆಪಡೆದಂತೆ ಕನ್ನಡಿಗರು ಅವರಿಂದ ಇನ್ನೂ ಹೆಚ್ಚಿನ ಸಾಹಿತ್ಯ ಪಡೆಯಬಹುದಲ್ಲವೇ?

---

# ೭ ನಗೆಯ ಬಗೆ

## ನಗೆಯ ವಿಶಿಷ್ಟತೆ

ನಗುವವನು ಮನುಷ್ಯನು; ನಗೆಯೇ ಅವನ ಲಕ್ಷಣ. ನಗೆ ಯಾರನ್ನೂ ಬಿಟ್ಟಿಲ್ಲ. ಬುದ್ಧನಿಗೆ ಸ್ಮಿತ, ರಾಮನಿಗೆ ಸರಸ, ಕೃಷ್ಣ ನಿಗೆ ಹಾಸ್ಯ! ನಗೆಯೊಂದು ಬೆಳಕು. ಬೆಳಕು ಒಡೆದು ವಿವಿಧ ಬಣ್ಣ ಗಳಾಗುವಂತೆ ನಗೆಯೊಡೆದು ವಿವಿಧ ವರ್ಣಗಳನ್ನು ತಳೆಯುವದು. ಕುಹಕ, ಕಟುಕಿ, ವ್ಯಂಗ್ಯ, ಸರಸ, ಮೂದಲಿಕೆ, ಸಬ್ಬವ, ವಿನೋದ, ಚೇಷ್ಟೆ, ಗೇಲಿ, ತಮಾಷೆ, ಮೋಜುಗಳಲ್ಲಿ ಅದರ ವಿವಿಧ ಬಣ್ಣಗಳು ಮೈದೋರುವವಂತೆ. ಬೇಂದ್ರೆ ಅವರ ಹರಟೆಗಳಲ್ಲಿ ತಿಳಿಯಾದ ಹಾಸ್ಯವು ತುಳುಕುತ್ತಿದೆ. ನಗೆಯು ಸುಖದ ಕುರುಹು, ಎಂಬುದು ಕೂಸಿ ನಿಂದ ಗೊತ್ತಾಗುತ್ತದೆ. ಜೀವನ ಕಲಹದಲ್ಲಿ ಬೇಸರಗೊಂಡ ಜೀವಕ್ಕೆ ಸುಖ ಬೇಕೆನಿಸುತ್ತದೆ. ಆ ಸುಖದ ಕುರುಹಾಗಿರುವ ನಗೆಯನ್ನು ಆಶ್ರಯಿಸುತ್ತಿರಬೇಕು, "ಹಾಸ್ಯವಾಯುವನ್ನು ಉಸುರಾಡಿಸಿಯೋ, ಕಟ್ಟಾಡಿಸಿದಾಗಲೋ, ಹುಚ್ಚುಹಿಡಿದಾಗಲೋ ಜನರು ನಗುತ್ತಿರುವ ದುಂಟು." ಇವುಗಳಲ್ಲಿ ಕಡೆಯವೆರಡು ಉಪಾಯಗಳನ್ನು ಬಿಡೋಣ. ಇನ್ನುಳಿದ ಹಾಸ್ಯವಾಯುವನ್ನು ಉಸುರಾಡಿಸುವ ಉಪಾಯವೆಂದರೆ, ನಗೆಯಾಟದವರ ಸಹವಾಸಕ್ಕೆ ಹೋಗುವುದು. ಇಲ್ಲವೆ, ಅಂಥವರು ಬರೆದ ಹಾಸ್ಯಕೃತಿಗಳನ್ನೇ ಸಹವಾಸದಲ್ಲಿ ಇರಿಸಿಕೊಳ್ಳುವುದು. ನಗೆ ಯಿಂದೇನಾಗುವುದು? ಅದಕ್ಕೆ ಬೇಂದ್ರೆಯವರೇ ಹೇಳುವುದು ಹೇಗೆಂ ದರೆ— "ನಗೆಯಲ್ಲಿ ಮುಖ ಅಗಲವಾಗುವದು; ಕಣ್ಣು ಹಿಗ್ಗುವವು; ತುಟಿ ಮಿನುಗುವದು; ಹಲ್ಲು ಮಿಂಚುವವು; ಗಲ್ಲ ಬೆಳಗುವವು; ಎದೆ ಉಕ್ಕು ವದು; ಪಕ್ಕಡಿ ನುಗ್ಗುವವು; ಹೊಟ್ಟೆತುಂಬುವವು; ಮೈ ಅಲಗುವದು; ನುಡಿ ನಡಗುವದು; ಕೈಮೀರಿಹೋದಾಗ ಕಣ್ಣನೀರಿಳಿಯುವದು; ಪಕ್ಕಡಿ ಬಿರಿಯುವಂತೆ ಹೊಟ್ಟೆ ಹುಣ್ಣಾಗುವಂತೆ ನೊಯ್ಯುವದು; ಉಗುಳು ತುಂತುರುಗರೆಯುವದು; ಅಟ್ಟಹಾಸದಿಂದ ಶಬ್ದಕೆಲೆದು ನೆಗೆಯುವದು."

## ನಕ್ಕುನಗಿಸುವ ಲೇಸುನಗೆ

ನಗುವವರನ್ನು ನಗಿಸುವ ನಗೆ ಸಾಮಾನ್ಯ; ನಗದವರನ್ನು ನಗಿಸುವ ದಕ್ಕೆ ಹಾಸ್ಯಗಾರಿಕೆ ಬೇಕು; ಅಳುವವರನ್ನು ನಗಿಸಲಿಕ್ಕೆ ರಸಿಕ ನಗೆ ಯಿರುವಂತೆ, ನಗುವವರನ್ನು ಅಳಿಸುವ ಕೇಡುನಗೆಯೂ ಇರುತ್ತದೆ. ಬೇಂದ್ರೆಯವರು ನಕ್ಕು ನಗಿಸುವದಕ್ಕಾಗಿ ಅಳುನುಂಗಿ ನಗುತ್ತಾರೆ. ಅದಕ್ಕೆ ಉದಾಹರಣೆಗಳು ಅವರ ಹರಟೆಗಳಲ್ಲಿ ವಿಪುಲವಾಗಿ ಸಿಗುತ್ತವೆ.

**ಮಾನಪತ್ರ ಸಮಾರಂಭ** :— ಕೆಲವರಿಗೆ ಸಿಹಿಸಿಗುವದರಿಂದ ಹಬ್ಬವೆನಿಸಬಹುದು; ಗ್ಯಾಸ್ ಬೆಳಕಿನ ಮೂಲಕ ಹುಣ್ಣಿಮೆ ಅನಿಸ ಬಹುದು. ಭಜನೆಕೇಳಿ ಉತ್ಸವವೆನಿಸಬಹುದು. ಭಗವದ್ಗೀತೆಯಲ್ಲಿ ಬರುವ 'ಸಮಾರಂಭ' ದಂತೆಯೇ ಮಾನಪತ್ರ ಪ್ರಸಂಗಕ್ಕೆ ಸಮಾರಂಭ ವೆನ್ನಲೇನೂ ಪ್ರತ್ಯವಾಯುವಿಲ್ಲ " ವಂತೆ. "ಮಾನಪತ್ರದಲ್ಲಿ ಕೆಲವು ಪ್ರಕಾರಗಳು. ಜಗತ್ತಿನಲ್ಲಾಗಿದ್ದೆಲ್ಲ ತಾವೇ ಮಾಡಿದವರು ಅಥವಾ ಮಾಡಿಸಿದವರೆಂದು ವಾಚ್ಯವಾಗಿಯೂ, ಲಕ್ಷಣದಿಂದಲೂ, ವ್ಯಂಗ್ಯ ದಿಂದಲೂ, ಧ್ವನಿಯಿಂದಲೂ ಹೇಳಿಕೊಳ್ಳುವವರು 'ಸ್ವಯಂ ಮಾನ ಪತ್ರದ ಪದ್ಧತಿ' ಯವರು; ತಮ್ಮಸಲುವಾಗಿ, ವೃತ್ತಪತ್ರಿಕೆಗಳಲ್ಲಾಗಲಿ, ಖಾಸಗೀ ಪತ್ರಗಳಲ್ಲಾಗಲಿ ಪ್ರಶಂಶಾಪರ ಶಬ್ದವುಳ್ಳ ಮತ್ತು ಕೆಂಪು ನೀಲಿ ಪೆನ್ಸಿಲಿನಿಂದ ಬಣ್ಣಿಸಿದ ವಾಕ್ಯಗಳನ್ನು ಜನರಿಗೆ ತೋರಿಸಿ ನಿರಭಿ ಮಾನಿಗಳಂತೆ ಕುಳಿತುಕೊಳ್ಳುವರು 'ತಟಸ್ಥಮಾನಪತ್ರ ಪದ್ಧತಿ' ಯವರು. ಇನ್ನು ಎಲ್ಲ ಪ್ರಮುಖರ ನಿಂದೆ ಮಾಡಿ ತಮ್ಮ ಸ್ತುತಿಯಾಯಿ ತೆಂದು ತಿಳಕೊಳ್ಳುವ ಮಹಾತ್ಮರು 'ಅವಧೂತ ಅಥವಾ ದಿಗಂಬರ ಪದ್ಧತಿ' ಯವರೆನಿಸುವರು. ಶಾಲನ್ನು **ತಲೆಗೆಸುತ್ತಿದ** ಪಂಡಿತರು ಮಾನ ಪತ್ರವನ್ನು ಹೀಗೆ ಓದಿದರು— "....ತಮ್ಮ ಗುಣಗಳನ್ನು ವರ್ಣಿಸಲು ನಮಗೆ **ಬಾಯಿಯಿಲ್ಲ**. ತಮ್ಮ ನ್ಯಾಯದ **ಬೆಳಕು** ಪ್ರಾಂತದಲ್ಲೆಲ್ಲಾ ಬಿದ್ದಿದೆ. ತಮ್ಮ ಕೀರ್ತಿ **ಎಲ್ಲರ ಬಾಯಲ್ಲಿಯೂ ನೆಲೆಗೊಂಡಿದೆ**. ನಾವು ಸತ್ತರೂ ತಮ್ಮನ್ನು ಮರೆಯುವಂತಿಲ್ಲ." ಪಂಡಿತರು ತಲೆಗೆ ಸುತ್ತಿದ್ದು ಶಾಲೇ ಅಲ್ಲವೇ? ಬಾಯಿಯಿಲ್ಲವಾದರೆ, ಏತರಿಂದ ವರ್ಣಿ ಸಿದರೋ. ಬೆಳಕು ಪ್ರಾಂತದಲ್ಲೆಲ್ಲಾ ಬಿದ್ದಿದ್ದು ನಿಜ. ಎಲ್ಲರ ಬಾಯಲ್ಲಿಯೂ

ನೆಲೆಗೊಂಡಿದ್ದು....ಏನು? ಇರಲಿ. ಮಾನಪತ್ರದ **ಮೊದಲನೇ ವಿಧಿ** ಪತ್ರಂ, ಮಾನಪತ್ರ; ಆಮೇಲೆ ಪುಷ್ಪಂ-ಹೂಮಾಲೆ; ಆಮೇಲೆ ಫಲಂ-ಹಣ್ಣು! ಆಮೇಲೆ ತೋಯಂ-ಚಹಾ! ಬಹಳಷ್ಟು ತೋಯ ಹಾಕಿದ ಚಹಾ. "ಪತ್ರಂ ಪುಷ್ಪಂ ಫಲಂ ತೋಯಂ" ಎಂದು ಭಗವದ್ಗೀತೆಯಲ್ಲಿ ಮಾನಪತ್ರದ ವಿಧಿಯನ್ನು ಹೇಳಲಾಗಿದೆ. "ಮೊನ್ನೆ ಮೊನ್ನೆ ನಾನು ನಮ್ಮ ಬಡತರ್ಫ ಮಾಡಿದ ಆಳುಮಗನಿಗೂ ಒಂದುತುಣುಕು ಮಾನಪತ್ರ ಕೊಟ್ಟೆನೆಂ"ದು ಹೇಳುತ್ತಾರೆ.

**ಕಸಬರಿಗೆ**:-"ಮೊದಲಿನ ಜನರು ಗಹನಗಿರಿಗಹ್ವರಗಳಲ್ಲಿರುತ್ತಿದ್ದರು. ಅವರ ವಿಚಾರಗಳೂ ಗಹನವಾಗಿಯೂ ದೊಡ್ಡ ಗುಡ್ಡದಂಥವುಗಳಾಗಿಯೂ,ಗೂಢವಾಗಿಯೂ ಇರುತ್ತಿದ್ದವು. ಈಗ ಕಾಲ ತಿರುವುಮುರುವಾಗಿದೆ. ಬುದ್ಧದೇವ, ಅಹಂಬ್ರಹ್ಮಾಸ್ಮಿ ಮೊದಲಾದ ಮಾತು ಕೇಳುತ್ತಿದ್ದಾಗ ತೂಕಡಿಸುವವರು, 'ಕಸಬರಿಗೆ' ಎಂದಾಗ ಕಣ್ತೆರೆದು 'ಕಸಬರಿಗೆ! ಮುಂದೇನು?' ಎಂದು ಕೇಳಿದರು; ಅಪ್ಸರೆಯರು ಬಂದು ಚಾಮರ ಬೀಸಿದಂತಾಗಿರಬೇಕು ಆ ಮಾತು ಕೇಳಿ....ಕಸಬರಿಗೆ ಎಂದರೆ ಲಕ್ಷ್ಮಿ. ಅದು ಹುಲ್ಲಿನಿಂದ ಮಾಡಿದ್ದೆಂದು ಹುಲ್ಲಿಗಿಂತ ಕ್ಷುಲ್ಲಕವೇ? ಕಸಬಳಿಯುವದರಿಂದ ಕಸಕ್ಕಿಂತ ಕಡೆಯಾಯಿತೇ? ಮೂಲೆಯಲ್ಲಿರುವದರಿಂದ ಮೂಲೆಗುಂಪಾಯಿತೇ? ಮಹಾತ್ಮರಿಗೆ ಗಾಳಿಬೀಸುವ ನೆವದಿಂದ ಅವರನ್ನು ಮರೆಮಾಡಿ ತನ್ನನ್ನೇ ಮೆರೆಯಿಸಿಕೊಳ್ಳುವ ಚವರಿಯನ್ನು ನಿವಾಳಿಸಬೇಕು ಈ ಕಸಬರಿಗೆಯ ಮೇಲಿಂದ! 'ಜಗತ್ತಿನ ಹೊಲಸನ್ನು ಗೂಡಿಸಿ ಕಸದ ಮೂಲೆಯಲ್ಲಿಯೂ ಏಕಾಕಿಯಾಗಿ ಕುಳಿತಿರುವ ಅವಧೂತನೇ, ನಮೋ ನಮೋ ಅನ್ನಬೇಕು ಎಂದಾಗ ಶ್ರೋತೃಗಳಿಗೆ ಆಕಳಿಕೆಯಿಲ್ಲ, ತೂಕಡಿಕೆಯಿಲ್ಲ; ನಿದ್ದೆಯಿಲ್ಲ ಗೊರಕೆಯಿಲ್ಲ. ನಾಸಂದೆ-'ಅಯ್ಯಾ! ಬುದ್ಧದೇವನನ್ನು ಕಸಬರಿಗೆ ಮಾಡಿ ಬಿಟ್ಟಿರುವಿರಿ! ಕಸಬರಿಗೆಯನ್ನಾದರೂ ಬುದ್ಧದೇವನನ್ನಾಗಿ ಮಾಡಿಕೊಳ್ಳಿ!"

**ಉಗುಳುವುದು**:— "ಇದೇನು ಮಹಾವಿಷಯವೆಂದು ಪುಟ್ಟಕ್ಕೆ ಉಗುಳುಹಚ್ಚಿ ತಿರುವಿ ಹಾಕಬೇಡಿ. ಅದು ಎಲ್ಲರ ಬಾಯೊಳಗಿನದಾದ ಮಾತ್ರಕ್ಕೆ ಎಲ್ಲರ ಕೈಯೊಳಗಿನದಲ್ಲ.... ರೋಗಿಯ ಉಗುಳಿನ ಬಗ್ಗೆ

ಡಾಕ್ಟರರು ಎಚ್ಚರಪಡಲು ಹೇಳುವಷ್ಟು, ತಾವು ಕೊಡುವ ಔಷಧ ರೂಪ ವಾಗಿರುವ ವಿಷದ ಬಗ್ಗೆಯೂ ಹೇಳುವದಿಲ್ಲ. ಉಗುಳುವುದು ಮನುಷ್ಯ ಲಕ್ಷಣ; ಮತ್ತೇನೂ ಅಲ್ಲ. ಕೆಲಕೆಲವು ನಾಯಿಗಳಿಗೆ ಇದ್ದಷ್ಟು ತರ್ಕತಿಳು ವಳಿಕೆ ಹಲಕೆಲವು ನಾಯಕರಿಗಿರುವದಿಲ್ಲ—ಆದರಲ್ಲಿ ರಂಗಭೂಮಿಯೊಳಗಿ ನವರೂ ಬಂದರು, ಹೊರಗಿನವರೂ ಬಂದರು. ನಮಗೆ ನೆಟ್ಟಗೆ ಉಗುಳಲಿಕ್ಕೆ ಬರುವದಿಲ್ಲವಾದ್ದರಿಂದ ನಾಟ್ಯಕಲೆಯಲ್ಲಿ ತಿದ್ದುಪಡೆಯಾಗಿಲ್ಲ. ನಾಟ್ಯಗೃಹ ದಲ್ಲಿ 'ಉಗಳಬಾರದು' ಎಂದು ಬರೆದಿರುವುದು ಅವರ ಮುಂಜಾಗ್ರತೆ. ಆದರೆ ಪ್ರೇಕ್ಷಕರು ಉಗುಳುವುದನ್ನು ಬಿಟ್ಟಿಲ್ಲವಾದರೂ, ತೆಳಗೆ ಉಗುಳು ತ್ತಾರೆ; ಅದು ಉಗುಳುವುದರ ಅಧಃಪತನ! ನೋಡುವವರು ಉಗುಳು ನುಂಗಿಕೊಂಡಿರದಿದ್ದರೆ ಆಡುವವರ ಹೊಟ್ಟೆತುಂಬುತ್ತಿತ್ತೇ? ಶೇಕ್ಸಪೀಯ ರನು ಉಗುಳುವಬಗ್ಗೆ "ಸುರತನಗರದ ಶ್ರೇಷ್ಠಿ" ಎಂಬ ನಾಟಕವನ್ನೇ ಬರೆ ದಿದ್ದಾನೆಂದು ಹೇಳಿ ಅದನ್ನು ವಿವರಗೊಳಿಸಿದ್ದಾರೆ. ವೇದಕ್ಕೂ ಉಗು ಳಿಗೂ ಸಂಬಂಧವಿದ್ದುದರಿಂದಲೇ 'ವೇದಮಂತ್ರಗಳನ್ನು ಉಚ್ಚರಿಸು ವಾಗ ಆ ಬ್ರಹ್ಮಬಿಂದುಗಳು ಹಾರುತ್ತವೆ.

**ನನ್ನ ಅವತಾರ:—**"ಚಿಕ್ಕಂದಿನಲ್ಲಿ ನಾನು ಬಾಳುವೆಗೆ ಜೇಸತ್ತವ ನಂತೆ ಇರುತ್ತಿದ್ದುದರಿಂದ ನಾನು ಬೈರಾಗಿಯಾಗಿ ದೇಶಾಂತರಕ್ಕೆ ಹೋಗಬಹುದೇನೋ ಎಂದು ಮನೆಯವರಿಗೆ ಭಯ. ಮದುಯಾದ ಮೇಲೆ ವೇದಾಂತ ಗ್ರಂಥಗಳನ್ನು ಓದುತ್ತಿದ್ದೆನಾದ್ದರಿಂದ ನಾನು ಸನ್ಯಾಸಿಯಾಗಬಹುದೆಂದು ಹೆಂಡತಿಗೆ ಹೆದರಿಕೆ. ಶರಣರವಚನ, ದಾಸರ ಪದಗಳನ್ನು ನನ್ನ ಸಂಗ್ರಹದಲ್ಲಿ ಕಂಡು, ನಾನು ಸಾಧುವಾಗಬಹು ದೆಂದು ಮಕ್ಕಳಿಗೆ ಬೆದರಿಕೆ. ಅವೆಲ್ಲ ಕುತ್ತಗಳು ದಾಟಿದವು. ಆದರೆ ವಿಭೂತಿಗಳ ಮಹಿಮಗಳು ನನ್ನ ಕಣ್ಣಿಗೆ ಬಿದ್ದಹಾಗೆಲ್ಲ ನಾನೂ ಎಲ್ಲಿ ಅವತಾರವಾಗುವೆನೋ ಎಂಬ ಭಯವು ನನಗೇ ಉಂಟಾಯ್ತು. ಆ ಹೆದ ರಿಕೆಯ ಸಿಧಿಧ್ಯಾಸದಲ್ಲಿಯೇ ಇದ್ದಾಗ ಒಮ್ಮಿಂದೊಮ್ಮೆ ಅವತಾರವಾಗಿ ಬಿಟ್ಟೆ. ಆಗಿ ಹೋದುದಕ್ಕೆ ಉಪಾಯವಿಲ್ಲ. ಕುತ್ತಿಗೆಯ ಮೇಲೆ ಚಕ್ರ, ಎದೆಯ ಮೇಲೆ ಪಾದ, ಕಾಲಲ್ಲಿ ಆನೆ, ಕೈಯಲ್ಲಿ ಶಂಖ, ಕಣ್ಣಲ್ಲಿ ಹೂ ಇವೇ ನನ್ನ ಅವತಾರದ ಕುರುಹು. ರಾಮಕೃಷ್ಣರ ಕುಂಡಲಿಗಳಿಗಿಂತ

ನನ್ನ ಜನ್ಮಕುಂಡಲಿ ದೊಡ್ಡದು; ಅದಕ್ಕೆ ನಾನು ಕಟ್ಟು ಹಾಕಿಸಿರುವೆನಾಪ್ಪ ರಿಂದ ಅವರಿಗಿಂತ ನನ್ನ ಜನ್ಮಕುಂಡಲಿಕವು ಒಂದು ಗುಂಜಿತೂಕ ಹೆಚ್ಚೂ ಆಗಬಹುದು. ನನ್ನ ಅವತಾರದ ಬಗ್ಗೆ ಭವಿಷತ್ ಪುರಾಣದಲ್ಲಿ ಆಧಾರ ವಿದೆ. ಆದರೆ ಅದು ದುರ್ಲಭ; ಇಲ್ಲೇ ಇಲ್ಲ. ನಾನು ಅವತಾರ ಎಂಬ ಬಗ್ಗೆ ನಿಮ್ಮ ಮನಸ್ಸಿನಲ್ಲಿ ಮಾರ್ಪಾಟಾಗಬೇಕು. ಹನ್ನೊಂದರ ಮೇಲೆ ಇನ್ನೊಂದು ಅವತಾರವಾದರೂ ತಪ್ಪೇನು? ದೇವರೇನು ಶ್ರುತಪುರಾಣ ಗಳ ಆಳಲ್ಲ, ಯಜಮಾನ. ತನ್ನ ಮಾತನ್ನು ಮೀರಲು ತನಗೇ ಬರ ಬಾರದೇ? ಚಿಕ್ಕವನಿರುವಾಗಲೇ ನಾನು ಹನ್ನೊಂದು ಉಂಡೆಗಳನ್ನು ತಿಂದಿದ್ದೆ; ಅದು ಹನ್ನೊಂದನೇ ಅವತಾರದ ಪೂರ್ವ ಚಿಹ್ನ. ಈ ಅವತಾರ ದಲ್ಲಿ ನಾನು ಏನೂ ಕೆಲಸವನ್ನಿಟ್ಟುಕೊಂಡಿಲ್ಲ. ಇದೇ ಈ ಅವತಾರದ ಮಹತ್ವ. ತೀರ ಸಾಮಾನ್ಯ ಮನುಷ್ಯನಂತೆ ಸುಖದುಃಖಭೋಗಿಸಿ, ವಿವೇಕ ಅವಿವೇಕ ಮಾಡಿ ದೇಹಬಿಟ್ಟು ಹೋಗತಕ್ಕವನು. ಹಾಗೇ ಹೋಗಬಾರದೆಂದು ಇದೊಂದು ಲೇಖವನ್ನು ಬರೆದಿದ್ದೇನೆ. ಈ ಅವ ತಾರದಲ್ಲಿ ನನಗಾರೂ ವಿರೋಧಿಗಳೇ ಇಲ್ಲ. ದೇವರೂ ಒಬ್ಬನೇ, ನಾನೂ ಒಬ್ಬನೇ ಆದ್ದರಿಂದ ನಾನು ದೇವರು."

**ವಿಮರ್ಶೆಯನ್ನು ಹೇಗೆ ಮಾಡಬೇಕು?:—** "ಗ್ರಂಥದ ಹೊಟ್ಟೆ ಯೊಳಗಿನದನ್ನು ತಿಳಕೊಳ್ಳುವದಕ್ಕಿಂತ ಗ್ರಂಥಕರ್ತನ ಹೊಟ್ಟೆಯೊಳಗಿನ ದನ್ನು ತಿಳಕೊಳ್ಳಬೇಕು. ಅವನು 'ವಿಮರ್ಶೆಗಾಗಿ' ಎಂದು ಬರೆದು ತನ್ನ ಗ್ರಂಥವನ್ನು ಕಳಿಸಿದ್ದರೂ ಅದು ಶಿಷ್ಟಾಚಾರವೇ ಹೊರತು, ಅದು ಅವನ ಹೊಟ್ಟೆಯೊಳಗಿನ ಮಾತಲ್ಲ. 'ಸ್ವಾಮಿ! ದಯಮಾಡಿ ನನ್ನ ಪುಸ್ತಕ ಪ್ರಕಟನೆಯನ್ನು ಮುದ್ರಿಸಬೇಕು. ಅವಶ್ಯವಾಗಿ ಹೊಗಳಬೇಕು. ಈ ಶಿಷ್ಟಾಚಾರದ ಧೈರ್ಯವು ತಮಗಿರದಿದ್ದರೆ ಸುಮ್ಮನಾದರೂ ಇರ ಬೇಕು' ಎಂಬುದೇ ಆ ಸಂಕೇತದ ಅರ್ಥ. ಬಾಲಗ್ರಂಥಕಾರರನ್ನು ಪ್ರೋತ್ಸಾಹಕ್ಕಾಗಿ, ತರುಣಗ್ರಂಥಕಾರರು ತಮಗೆ ಇದಿರುತ್ತರ ಕೊಟ್ಟು ಅಪಮಾನ ಮಾಡಬಾರದೆಂದು, ವೃದ್ಧ ಗ್ರಂಥಕಾರರಿಗೆ ಸಲ್ಲತಕ್ಕ ಮಾನ ವೆಂದು ಹೊಗಳಬೇಕು. ಬಾಲರು ಅಜ್ಞಾನಿಗಳು, ತರುಣರು ಅನನು ಭವಿಕರು, ವೃದ್ಧರು ವಿಸ್ಮರಣಶೀಲರು. ಅವರಿಂದ ದೋಷಗಳಾಗುವದು

ಸಹಜ; ಆದರೆ ಅವನ್ನು ಎತ್ತಿ ತೋರಿಸುವದು ತಪ್ಪು. ಅಧಿಕಾರ ಅಧ್ಯಯನಗಳಿಲ್ಲದೆ ಬರೆಯುವುದು, ಮುದ್ರಾರಾಕ್ಷಸನ ಅರಿವುಗೇಡಿತನ, ಗ್ರಂಥಗಳನ್ನು ಮಾರುವ ಹವಣಿಕೆ, ಕೊಳ್ಳುವವರಿಗೆ ಹಾನಿ— ಮಾರು ವವರಿಗಷ್ಟೇ ಲಾಭವಾಗುವಂತೆ ಇಡುವ ಬೆಲೆ, ಇವೆಲ್ಲ ದೋಷಭಾಂಡಾರ ಗಳಿದ್ದರೂ 'ದೋಷಾಕರ' ನಂತೆ— ಆದರ್ಶಪ್ರಾಯ. ಕೆಲವರು ಮುನ್ನುಡಿಯಲ್ಲಿ ಬರಕೊಳ್ಳುವ— 'ತಮಗೆ ವ್ಯಾಕರಣ ಗೊತ್ತಿಲ್ಲ; ಛಂದಸ್ಸು ತಿಳಿಯದು; ಅಭ್ಯಾಸ ಮಾಡಿದವರಲ್ಲ; ಅನುಭವತೀರಕಡಿಮೆ" ಎಂಬ ಮಾತುಗಳನ್ನೇ ಹತ್ತುಸಲ ಓದಿಕೊಂಡಿದ್ದರೆ ಮುಂದಿನ ಗ್ರಂಥ ವನ್ನೇ ಬರೆಯುತ್ತಿರಲಿಲ್ಲ."

**ಸಾವಿನ ಕೂಡ ಸರಸ:—** "ಹುಲ್ಲು ಮರಗಳಂತೆ ಬಿರುಗಾಳಿಗೆ ಹೆದರದು. ಕತ್ತೆ ಚಿತ್ರಕಾರರ ಮಿಂಡವಿದ್ದ ಹಾಗೆ. ನಾನು ಜೇನೆಕೊಳಕ. ನನ್ನ ಎದೆ ಹಾರುವದರ ಮೇಲಿಂದ ನನ್ನ ಆರೋಗ್ಯವನ್ನು ಪರೀಕ್ಷಿಸು ತ್ತಿದ್ದ ವೈದ್ಯರು, ಅದೂ ನಿಂತುಬಿಟ್ಟಂತೆ ಕಡಿಮೆಯಾಗಲು, ಶ್ವಾಸೋ ಚ್ಛ್ವಾಸದ ಮೇಲಿಂದ ಪರೀಕ್ಷಿಸತೊಡಗಿದರು; ಅದು ಕಾಣಬರದಾಗಲು ಕಣ್ಣಿನ ರೆಪ್ಪೆ ಬಡೆಯುವುದೇ ನನ್ನ ಬದುಕಿನ ಕುರುಹಾಯ್ತು. ನನಗೆ ಎಲ್ಲ ರೋಗಗಳ ಇಂಜೇಕ್ಶನ ಆಗಿದ್ದರಿಂದ ರೋಗದಿಂದ ಸತ್ತೇನೆಂಬ ಭಯ ನನಗಿರಲಿಲ್ಲ. ಸಾವಿನಿಂದ. ಸತ್ತರೆ 'ತನಗೇಕೆ ಆ ಅಪವಾದ' ವೆಂದು ಸಾವು ನನಗೆ ಅಂಜುತ್ತಿರಬೇಕು; ಅದರಿಂದ ಅದರ ಬಗ್ಗೆ ನನಗೆ ಅನಾದರವುಂಟಾಗತೊಡಗಿತು. ಸಾವಿನ ಕೂಡ ಒಂದೇ ಬಟ್ಟ ಲಲ್ಲಿ ದಿನಾಲು ಕಷಾಯ ಕುಡಿಯುತ್ತಿದ್ದೆ......... ನನ್ನ ಅನಿಶ್ಚಿತ ರೋಗಕ್ಕೆ ಬೇಸತ್ತು ವೈದ್ಯರು ಕೈಬಿಟ್ಟರು. ನನಗೆ ದಿಗಿಲು ಬಿತ್ತು. ಹಾಗೆಯೇ ಬಿದ್ದಿರಲು—ಸತ್ತ ಹೊರತು ಸಾಯುವ ಉಪಾಯವೇ ಬೇರೆಯಿಲ್ಲವೆಂದು ಹೊಳೆಯಿತು. ಗುದ್ದಿದರೆ ಸಾಯುವ ನಾನು ಹಿಂಸಾಮಾರ್ಗದ ಜಾತಿ ವೈರಿಯಾಗಿದ್ದೆ. ಸುಲಭವಾಗಿ ಸಾಯಬೇಕೆನ್ನುವದಕ್ಕೆ—ಉಸಿರೇ ಪ್ರಾಣ ವಾದ್ದರಿಂದ ಅದನ್ನು ನಿಲ್ಲಿಸಿದರೆ ಜೀವದ ಜಿಗಿದಾಟವೇ ನಿಲ್ಲುವದೆಂದು ಎಣಿಸಿದೆ, ಆದರಂತೆ ಉಸಿರು ಕಟ್ಟುವ ವಿವಿಧ ಉಪಾಯಗಳನ್ನು ಕೈಕೊಂಡು ಸಾಗಿಸಿದೆ. ಆದರೆ ಅದು ಪ್ರಾಣಾಯಾಮವೆಂದು ಎಲ್ಲಿಯೋ

ಓದಿದ ಮೇಲೆ ಗೊತ್ತಾಯಿತು. ಆದ್ದರಿಂದ ಆ ಉಪಾಯ ಬಿಟ್ಟು ಉರುಲು ಹಾಕಿಕೊಳ್ಳುವ ನಿಶ್ಚಯ ಮಾಡಿದೆ. ನಾಲ್ಕು ಗಂಟೆಗೆ ಉರುಲು ಹಾಕಿಕೊಳ್ಳಬೇಕೆಂದು ಗಟ್ಟಿಮಾಡಿ ಮಲಗಿದರೆ, ಗಡದು ನಿದ್ದೆಯು ಹತ್ತಿ ಆರುಗಂಟೆಗೆ ಎಚ್ಚರಾಯ್ತು. ಮರುದಿನ ಆಲಾರ್ಮ ಇಟ್ಟು ಮಲಗಿದರೂ ಪ್ರಯೋಜನವಾಗಲಿಲ್ಲ. ಭೇದಿಗೆ ತಕ್ಕೊಂಡು ಮಲಗಲು ನಾಲ್ಕು ಗಂಟೆಗೆ ಎಚ್ಚರವೇನೋ ಆಯ್ತು; ಆದರೆ ಕೈಕಾಲಿಗೆ ಹೋಗಿ ಬರುವಷ್ಟರಲ್ಲಿ ಆರುಗಂಟೆಯಾಗಿ ಸಮಯ ತಪ್ಪಿಸಿತು. ಸಂಕಲ್ಪ ಮಾಡಿ ಮಲಕೊಂಡಾಗ ಹೊತ್ತಿಗೆ ಸರಿಯಾಗಿ ಎಚ್ಚರಾಗಲು, ಎದ್ದವನೇ ಹಾಸಿಗೆ ಹೊದಿಕೆಗಳನ್ನೆಲ್ಲ ಸುತ್ತಿ, ಕಟ್ಟಿ ಗೂಟಕ್ಕೆ ತೂಗಹಾಕಿದೆ. ಉರುಲು ಹಾಕಿಕೊಳ್ಳಲು ಸಿದ್ಧನಾಗಿದ್ದರಿಂದ ಮೈಮೇಲಿನ ಅರಿವೆಗಳೆಲ್ಲ ಹಾಸಿಗೆಯಲ್ಲಿ ಸಿಕ್ಕು ಬಿಟ್ಟಿದ್ದವು; ಮೈಮೇಲೆ ಕೌಪೀನವೊಂದಿತ್ತು; ಆದರಿಂದ ಹೇಗೆ ಉರುಲು ಹಾಕಿಕೊಳ್ಳಲಿ? ಹಗ್ಗ ಸಿಗಲೇ ಇಲ್ಲ; ಮರೆತು ಹಾಸಿಗೆಯನ್ನು ಕಟ್ಟಿದ್ದೆ. ಅದು ನಿಂತು ಹೋಯಿತು. ಗುರಿ ಹೊಡೆಯಲು ಕಲಿತು, ಗುಂಡು ಹಾಕಿಕೊಳ್ಳುವ ಉಪಾಯಕ್ಕೆ ಬಂದೆ. ಆದರೆ ಜೀವವನ್ನು ಕಾಡುಮೃಗದಂತೆ ಬೇಟೆಯಾಡುವುದೇ? ವಿಷ ಕುಡಿಯುವುದು ಒಳ್ಳೆಯದೆನಿಸಿತು. ವಜ್ರದಂಥ ಬೆಲೆಯುಳ್ಳ ಒಡವೆಯನ್ನು, ಬಡಜೀವ ಕೊಲ್ಲಲು ಉಪಯೋಗಿಸಬೇಕೇ? ಅಫು ನುಂಗಬೇಕೆಂದರೆ, ಸಾಯುವ ಪೂರ್ವದಲ್ಲ ಅಮಲೇರಿ, ಎಚ್ಚರದಪ್ಪಿ ಸಾಯುವುದು ಸರಿಯಲ್ಲ; ಕಣ್ತೆರೆದು ನಾನು ಎಚ್ಚರದಿಂದ ಸಾಯಬೇಕೆಂದು ಸಂಕಲ್ಪಿಸಿದ್ದೆ. ಕೊನೆಗೆ ವಿಷಪ್ರಯೋಗವೇ ಬೇಡವೆನಿಸಿತು. ಅಷ್ಟರಲ್ಲಿ ನಾನು ಆರೋಗ್ಯವಂತನಾಗಿದ್ದರಿಂದ, ಅಂಥ ಆರೋಗ್ಯವಂತನು ಒಮ್ಮೆಲೆ ಸತ್ತರೆ ವಿಷಪ್ರಯೋಗವಾಗಿರಬೇಕೆಂದು ಜನರು ಅನುಮಾನ ಕಟ್ಟುವರು; ಬೇರೆಯವರು ವಿಷ ಹಾಕಿರಬೇಕೆಂದು ಅನುಮಾನಪಡುವುದು ನನಗೆ ಬೇಡವಾದ ಮಾತು. ನನ್ನ ಮರಣದಿಂದ ಹೆರರಿಗೆ ತೊಂದರೆ ಬೇಡ. ಕೆರೆ ಬಾವಿಯ ಪಾಲಾಗಬೇಕೆಂದೆ. ಕೆರೆಯ ನೀರು ಜನಕ್ಕೂ ದನಕ್ಕೂ ಉಪಯೋಗವಾಗುವದರಿಂದ ಆದನ್ನು ಕೆಡಿಸುವುದು ಸರಿಯಲ್ಲ. ಸೀನೀರಿನ ಭಾವಿಯಲ್ಲಿ ಹಾರಿಕೊಳ್ಳಲಾರೆ; ಬದುಕಿಸಿದ ನೀರು ಕುಡಿದು ಸತ್ತನೆಂದು

ಅಪಕೀರ್ತಿ ಆದಕ್ಕೆ. ಕುದುರೆಹತ್ತಿ ಸಂಚರಿಸಿದರೆ, ಕೆಲವು ಭಾವಿಗಳಲ್ಲಿ ನೀರಿರಲಿಲ್ಲ; ಕೆಲವುಗಳಲ್ಲಿ ಮಲೆತು ನಾರುತ್ತಿದ್ದವು. ಅಂಥಲ್ಲಿ ಹೇಗೆ ಹಾರುವುದು ?

**ಸಾರ್ವಭೌಮ ನಿರಂತರ ವರ್ಷಾಭವಿಷ್ಯ:—**"ಬರೆದ ಭವಿಷ್ಯದಂತೆ ಮಳೆಯಾಗಲಿಲ್ಲವೆಂದು ಒಕ್ಕಲಿಗರು ಕಣ್ಣೀರಿಟ್ಟಿದ್ದಾರೆ. ಮಳೆಯ ಭವಿಷ್ಯಕ್ಕೂ ನೀರಿಗೂ ಇರುವ ಸಂಬಂಧ ಅಷ್ಟೇ. ಮಳೆಯ ಭವಿಷ್ಯವನ್ನೇ ಇನ್ನೋದುವದಿಲ್ಲೆಂದು ಒಬ್ಬರು ನೀರು ಬಿಡುವವರಿದ್ದರು. ಆ ನೀರು ಸಹ ಹಾಳು ಅದೇ ಅವರು ನಮ್ಮ ವರ್ಷಾಭವಿಷ್ಯವನ್ನೋದಲು ಆನಂದ ಬಾಷ್ಪಗಳು ಸುರಿದವು. ಇದು ಶುಭ ಶಕುನ. ಮಳೆ ಬರುವುದೂ ಬಿಡುವುದೂ ದೇವರ ಕೈಯೊಳಗಿನ ಮಾತು. ಆದರೆ ಶಾಸ್ತ್ರಿಗಳ ವರ್ಷಾಭವಿಷ್ಯವು ಹೇಗೆ ಸುಳ್ಳಾದೀತು? ನಮ್ಮದು ಸಾರ್ವಭೌಮಿಕ ಭವಿಷ್ಯ. ಇಂಥ ವ್ಯಾಪಕ ಭವಿಷ್ಯದಲ್ಲಿ ಒಂದೆರಡು ತಿಥಿಗಳು ಹೆಚ್ಚು ಕಡಿಮೆ ಬಂದರೆ ಆದನ್ನು ಯಾರೂ ತಡೆದುಕೊಳ್ಳಬಹುದು. ಒಂದು ವರ್ಷ ಹೇಳಿದ ಮಳೆಗಳು ಇನ್ನೊಂದು ವರ್ಷ ಬಿದ್ದಿದ್ದನ್ನು ನಾವು ನೋಡಿದ್ದೇವೆ. ನಮ್ಮ ಭವಿಷ್ಯದ ಮೂಲಮಂತ್ರ 'ಪ್ರ–ಚ–ಸ–ದ–ತ್ರ' ಇವು ತಿಥಿಗಳ ಸಂಕ್ಷಿಪ್ತ ಹೆಸರು. ಒಂದೆರಡು ತಿಥಿ ಹಿಂದೆ ಮುಂದೆ ಆಗಬಹುದು; ಒಂದಿಲ್ಲ ಒಂದು ಕಡೆ ಮಳೆ ಬೀಳಬಹುದು. ಸಾರ್ವಭೌಮ-ನಿರಂತರ-ವರ್ಷಾ-ಭವಿಷ್ಯಕ್ಕೆ ಅಷ್ಟು ಬಹಳವೇ?

**ಹಸ್ತಸಾಮುದ್ರಿಕದ ಪ್ರಥಮ ಪಾಠಗಳು:—** "ಪಾಣಿಗ್ರಹಣದ ಕಾಲಕ್ಕೆ ಯಾವ ಕನ್ಯೆಯು ವರನೆಂದು-ಇದಿರು ನಿಂತವನ ಕೈಯಲ್ಲಿ ಕೈ ಕೊಟ್ಟು ಆದದ್ದಾಗಲಿ ಎಂದುಕೊಳ್ಳುವಂತೆ, ದೈವದ ಹಂಗುತೊರೆದೇ ಎಷ್ಟೋ ಜನರು ಯಾವ ಸಾಮುದ್ರಿಕಬ್ರುವರ ಕೈಯಲ್ಲಿಯೂ ಕೈಕೊಡುವರು. ಅವರ ಅಂಗೈಗಳಂತೆ ಹಿಂಗೈಗಳೂ ಬಹಳ ಜನರ ಕೈಯಾಡಿದ್ದರಿಂದ ನುಣುಪಾಗಿರುತ್ತವೆ. ಯಾರೂ ಕೇಳದ ಸಂಕಟ ಕಾಲದಲ್ಲಿ ತಮ್ಮ ಕೈ ತಾವೇ ಹಿಂದು ಮುಂದೆ ನೋಡಿಕೊಳ್ಳುವದನ್ನು ಕಂಡವರು ಇವರು ಸಾಮುದ್ರಿಕರಿರಬೇಕೆಂಬ ವಿಶ್ವಾಸದಿಂದ ಕೈ ತೋರಿಸುತ್ತಾರೆ. ತೋರಿಸುವವನ ಕೈ, ನೋಡುವವನ ಕಣ್ಣು ಇಷ್ಟೇ ಬಂಡವಲು ಸಾಕು.

ಸಾಮುದ್ರಿಕನಿಗೆ ಚುರುಕಾದ ನಾಲಿಗೆ ಮಾತ್ರ ಬೇಕು; ತೋರಿಸುವವನ ಕೈಯಿಲ್ಲದಿದ್ದರೂ ನಡೆದೀತು. ಸಾಮಾನ್ಯವಾಗಿ ಕೇಳುವ ಪ್ರಶ್ನೆಗಳೆಂದರೆ—ಆಯುಷ್ಯ, ಸಂತತಿ, ಧನಲಾಭ, ಸ್ತ್ರೀಸುಖ. ಮುದುಕರಿದ್ದರೆ ಮಾತ್ರ, ಮರಣ; ಸ್ತ್ರೀಯಿದ್ದರೆ ಸೌಭಾಗ್ಯ, ಸಂತತಿ. ಆಯುಷ್ಯ ಕಡಿಮೆಯೆಂದು ಯಾರಿಗೂ ಹೇಳಬಾರದು. ನೂರು ವರುಷವೆಂದು ಕಿವಿಯಲ್ಲಿ ಹೇಳಬೇಕು. ಈ ಮಾತು ಮಂದಿ ಕೇಳಿದರೆ ಆಯುಷ್ಯ ಹಾನಿಯೆನ್ನಬೇಕು. ಪ್ರಯತ್ನದಿಂದ ಗಳಿಸುವ ದುಡ್ಡಿಗಿಂತ ಅಡ್ಡದುಡ್ಡಿನ ಆಶೆಯಿದ್ದವರೇ ಬಹಳ ಜನ. ಅವರಿಗೆ ಅವರ ಲಕ್ಷಣನೋಡಿ ಧನ ಲಾಭದ ಎರಡು ಮೂರು ಪ್ರಸಂಗಗಳಿವೆ ಎನ್ನಬೇಕು. ಕೈ ತೋರಿಸಿ ದೈವಪರೀಕ್ಷೆ ಮಾಡಿಸುವವರಿಗೆ ಸುಖದುಃಖ ಮಿಶ್ರಿತ ಫಲಗಳನ್ನು ಹೇಳಬೇಕಲ್ಲದೆ, ಒಂದೆರಡು ಗಂಡಾಂತರಗಳನ್ನು ಸೂಚಿಸಲೂ ಮರೆಯಬಾರದು. "ನಾನೇನು ದುಡ್ಡಿಗೆ ಹೇಳುವ ಮಾರಿಗೆ ಜೋಯಿಸನಲ್ಲ" ಎಂದು ಹೆಮ್ಮೆ ಹೇಳಿಕೊಂಡು, ಹೊತ್ತು ದೂಡಿ ಗೆದ್ದವರಂತೆ ನಗಬೇಕು."

## ಹುಚ್ಚಾಟಗಳು

"ಅರವತ್ತು ನಾಲ್ಕು ಕಲೆಗಳು ಮಾನವಸೃಷ್ಟಿಯೊಳಗಿನ ಅರವತ್ತು ನಾಲ್ಕು ಶಕ್ತಿಗಳು. ದೇವಸೃಷ್ಟಿಯನ್ನು ಈ ಅರವತ್ತುನಾಲ್ಕು ರೀತಿಯಲ್ಲಿ ತನಗೆ ರುಚಿಯಾಗುವಂತೆ ಮಾನವನು ಮಾಡಿಕೊಂಡಿರುವನು. ದೇವಸೃಷ್ಟಿಯೊಳಗಿನ ರಮಣೀಯತೆಯ ದರ್ಶನವಾಗಿ, ಅದರ ಸಾಕ್ಷಾತ್ಕಾರವು ಸಾಮಾನ್ಯರಿಗೂ ಕೆಲಮಟ್ಟಿಗಾದರೂ ಆಗಲೆಂದು ಈ ಕಲೆಗಳ ಮೂಲಕ ಮಾನವನ ದಿವ್ಯಶಕ್ತಿಯ ಪ್ರಯತ್ನವು ಸಾಗಿರುವದು. ಗಾಯನ, ಚಿತ್ರ, ಶಿಲ್ಪ ಮೊದಲಾದವು ಕಲೆಗಳು. ನಾಟಕವು ಕಲೆಯಲ್ಲ. ವಿವಿಧ ಕಲೆಗಳ ಸಂಗಮ. ಸರ್ವಕಲೆಗಳ ಸಫಲತೆಯು ನಾಟಕದಲ್ಲಿದೆ. ಈ ಸಂಸಾರವನ್ನೇ ಒಂದು ವೇದವೆಂದು ಕಲ್ಪಿಸಿದರೆ, ನಾಟಕವು ಅದರ ರಹಸ್ಯವನ್ನು ಉದ್ಘಾಟಿಸುವ ಭಾಷ್ಯ. ಶ್ರೇಯದ ತುದಿದೋರುವ ಸೋಪಾನಪಂಕ್ತಿಯಾಗುವುದೇ ಅದರ ಉಪಯೋಗ; ಪ್ರೇಯದ ತಳಕ್ಕೊಯ್ಯುವ ಜಾರುಬಂಡಿಯಾಗುವದೇ ಅದರ ದುರುಪಯೋಗ. ನಾಟ್ಯ

ಸೃಷ್ಟಿಯಲ್ಲಿಯ ಪರದುಃಖವನ್ನು ಕಂಡು ಅದನ್ನು ನಿವಾರಿಸಲು ಪ್ರಯತ್ನ ಮಾಡದೆ ಉಳಿಯಬಹುದೇ? ಹುಚ್ಚಾಟಗಳಲ್ಲಿ ವ್ಯಂಗ್ಯ ಹಾಸ್ಯದ ರಸ ವಿರುತ್ತದೆ. ವ್ಯಂಗ್ಯ ಹಾಸ್ಯದ ವಕ್ರಕಿರಣಗಳ ಬೆಳಕಿನಲ್ಲಿ ಮಾನವರ ಮೋಹಮೋಸಗಳ ವೈಪರೀತ್ಯವು ವಿವರವಿವರವಾಗಿ ಕಣ್ಣಿಗೆ ಬೀಳು ವವು. ಪ್ರೇಕ್ಷಕ ಪದವಿಯ ಮೂಲಕವಾಗಿ ಬರುವ ತಾಟಸ್ಥ್ಯದಿಂದ ನಿರ್ಲಿಪ್ತದೇವತೆಗಳ ಪದವಿಯುಂಟಾಗಿ, ರಂಜನೆಯ ತನ್ಮಯತೆಯಲ್ಲಿ ಅಂತಃಕರಣದ ವೈಷಮ್ಯವು ಕಡಿಮೆಯಾಗುವದು; ನೈರ್ಘೃಣ್ಯವು ಸವೆದು ಹೋಗುವದು. ಈ ಸಂಸಾರವು ಅಂತಃಕರಣ ಶುದ್ಧಿಗೆ ಉಪಕಾರವಾದುದಾಗಿದೆ. ಮಾನವನು ತನ್ನ ಗುಣದೋಷಗಳನ್ನು, ಒಳಹೊರಗನ್ನು, ಕೀಳು ಮೇಲನ್ನು, ಉನ್ನತಿ ಅವನತಿ ಪಥಗಳನ್ನು ಒಂದಿಷ್ಟೂ ಬಿಡದೆ ನೋಡಬೇಕೆಂದು ಆಶಿಸಡುತ್ತಿದ್ದಾನೆ. ಮುಚ್ಚುಮರೆಯ ಬೇಸರ ಬಂದಿದೆ. ಅವಿಚಾರವನ್ನು ಹೊಡೆದುಹಾಕಬೇಕಾದರೆ ವಿವೇಕಶಕ್ತಿಯನ್ನೂ, ಸತ್ವವನ್ನೂ ಚೇತನಗೊಳಿಸಬೇಕು. ನಾಟಕಗಳಲ್ಲಿ ಪಕ್ಷ ಕಟ್ಟಿ ಹೋರಾಡುವದಕ್ಕಿಂತ ಪ್ರೇಕ್ಷಕರ ಅಂತಃಕರಣ ವಿವೇಕಗಳು ಜಾಗೃತವಾಗುವಂತೆ ಪಕ್ಷ ಪ್ರತಿಪಕ್ಷಗಳನ್ನು ಚಿತ್ರಿಸುವುದೊಳಿತು. ಕೆಲವು ರೋಗಗಳಿಗೆ ಔಷಧದಿಂದ ಗುಣವಾಗುವದಿಲ್ಲ. ಶಸ್ತ್ರಕ್ರಿಯೆಯೇ ಬೇಕಾಗುತ್ತದೆ. ಸುಕುಮಾರ ಪ್ರಯೋಗದಿಂದ ಪ್ರಯೋಜನವಾಗದಿದ್ದಲ್ಲಿ ಆವಿಷ್ಟ ಪ್ರಯೋಗವನ್ನು ಯೋಚಿಸಬೇಕು.''

ಬೇಂದ್ರೆ ಅವರ ''ಹುಚ್ಚಾಟಗಳು'' ''ನಗೆಯಹೊಗೆ'' ''ಉದ್ಧಾರ'' ''ಜಾತ್ರೆ'' ಮೊದಲಾದವುಗಳು ಸಾಮಾಜಿಕರ ಕಣ್ಣುಮುಂದೆ ಹಿಡಿದ ಕನ್ನಡಿಯೇ ಸರಿ. ಅವರು ಸೃಷ್ಟಿಸಿದ ಪಾತ್ರಗಳು ವಿಚಿತ್ರ, ಅವರ ಸಂಭಾಷಣೆಗಳು ಅವರ ಸ್ವಭಾವಕ್ಕೆ ತಕ್ಕಂತೆ ಇನ್ನೂ ವಿಚಿತ್ರ, ರಚನೆ ವಿಚಿತ್ರ ಹುಚ್ಚುಚ್ಚಾರದ ಹಿನ್ನೆಲೆ; ಅವುಗಳ ಜೋಡಣೆಯಲ್ಲಿಯೂ ವಿಚಿತ್ರ ನಗೆಗೀಡು. ಇವೆಲ್ಲವುಗಳಿಂದ ಅವು ಎಲ್ಲ ಮಗ್ಗುಲಿನಿಂದಲೂ ಹುಚ್ಚಾಟಗಳೇ ಆಗಿವೆ. ಪ್ರಕಟವಾದ ''ಹುಚ್ಚಾಟಗಳು'' ಪುಸ್ತಕದಲ್ಲಿ ಬಂದ ದೆವ್ವನ ಮನೆ, ಹಳಿಗೆಣೆಯರು, ತಿರುಕರಪಿಡುಗು, ಸಾಯೋ ಆಟಗಳ ದಾವಣಿಯಲ್ಲಿ 'ಗೋಲ್' ಎಂಬ ಗಂಭೀರ ನಾಟಕವನ್ನೂ

ಕಟ್ಟಿ ಸೇರಿಸಿದ್ದೇ ಹುಚ್ಚಾಟದ ಹೊಂದಿಕೆಯುಂತಿದೆ. ಗ್ಯಾದರಿಂಗ್ ಮೊದಲಾದ ಸಮಾರಂಭಗಳಲ್ಲಿ ಮಾಡುವ ನಾಟಕಗಳ ಮಾತು ಚೆನ್ನಾಗಿ ಕಲಿಯದ ಪಾತ್ರಗಳಿಗೆ, ತಪ್ಪಿದಲ್ಲಿ ಹೇಳಲಿಕ್ಕೆ ಪ್ರಾಮ್ಟ ಮಾಡಬೇಕಾಗುತ್ತದಷ್ಟೇ. ಪಾತ್ರದವರು ಆಡುವ ಮಾತುಗಳಿಗಿಂತ ಪ್ರಾಮುಟರರು ಹೇಳುವ ಮಾತೇ ಬಹಳವಾಗಿ ಕೇಳಿಬರುವದರಿಂದ ಪಾಮುಟರರೇ ಮುಂದೆ ನಿಂತು, ಪಾತ್ರದವರೇ ಹಿಂದೆ-ಪರದೆಯಲ್ಲಿ ನಿಂತಂತೆ ಆನಿಸುವದರಿಂದ. ಒಂದೇ ಪಾತ್ರವಿಟ್ಟು ಉಳಿದ ಪಾತ್ರಗಳೆಲ್ಲ ತೆರೆಯಲ್ಲಿಯೇ ನಿಲ್ಲುವಂತೆ ಮಾಡಿ "ತಿರುಕರ ಪಿಡುಗ"ನ್ನು ರಚಿಸಿದ್ದಾರೆ. ಸಾಗ್ರ ಸಂಗೀತ ನಾಟಕಗಳನ್ನು ಆಡುವ ಕಂಪನಿಯವರ ನಾಟಕಗಳನ್ನು ಅಣಕಿಸುವಂತೆ ಶಬ್ದಾರ್ಥವನ್ನು ಮುಂದಿಟ್ಟುಕೊಂಡು ಸ+ಅಗ್ರ+ಸಂಗೀತ ನಾಟಕವನ್ನು ಅಂದರೆ, ಆರಂಭದಲ್ಲಿ ಮಾತ್ರ ಒಂದು ಹಾಡುಳ್ಳ ನಾಟಕವೆಂದು "ಸಾಯೋಆಟ"ವನ್ನು ಬರೆದರು. "ತಿರುಕರ ಪಿಡುಗು" ಹುಚ್ಚಾಟವಂತೂ "ಕುಣಿಯೋಣು ಬಾರ" ಕವಿತೆಯಂತೆ ಪಟ್ಟಣಗಳಂತೆ ಹಳ್ಳಿಪಳ್ಳಿಗೂ ಹರಡಿ, ತಿರುಕರನ್ನು ಬಯ್ಯಲಿಕ್ಕೆ ಜನರ ಬಾಯಲ್ಲಿ ಬಯ್ಗಳ ರಾಶಿಯನ್ನೇ ಒದಗಿಸಿಕೊಟ್ಟಿದೆ. ಅಸಂಖ್ಯ ಜೀವ ಹೊಡೆದು ದಕ್ಕಿಸಿಕೊಳ್ಳುವ ಬಂಡುಖೋರರಂತೆ, ಹುಚ್ಚಾಟಗಳ ಮರೆಯಲ್ಲಿ ನಿಂತು ಎಂಥೆಂಥ ಮಾತುಗಳನ್ನು ಆಡಿ ದಕ್ಕಿಸಿಕೊಂಡಿದ್ದಾರೆ-ಬೇಂದ್ರೆ ಅವರು! "ದೈವುಳ್ಳವರ ಹೃದಯಕ್ಕೆ ದೇವರು ತಿರುಕರ ಹರಕು ಮುಚ್ಚಿಯು ಅಟ್ಟೇ ಇಟ್ಟುಕಳಿಸಿರಬೇಕೇ?" ಎನ್ನುವ ಒಂದು ಮಾತು ಉದಾಹರಣೆ ಸಾಕು. ದೈವುಳ್ಳವರಿಗೆ ಸಿಕ್ಕ ಉಡುಗರೆ ಇದಾಯ್ತು; ಇನ್ನು ಬಡಪಾಯಿಗಳಾದ-ಜೋಗತಿ-ಗೊಲ್ಲತಿ-ಬುಡಬುಡಕಿ ಮೊದಲಾದವರ ಮಂಗಲಾರತಿಯನ್ನು ಕೇಳಲೇ ಬಾರದು. 'ಹುಚ್ಚಾಟಗಳ' ಎಲ್ಲ ನೈಗಳೂ ಹದನವಾಗಿರುವ ಚಕ್ರ. ಹೀಗಿದ್ದರೂ ಯಾರ ಪಕ್ಷವನ್ನೂ ಎತ್ತಿ ಹಿಡಿದಿಲ್ಲ; ಯಾವುದನ್ನೂ ಎತ್ತಿ ಒಗೆದಿಲ್ಲ. ಪ್ರೇಕ್ಷಕ ಪದವಿಯಲ್ಲಿ ಕುಳಿತ ನಾವೇ ಅದನ್ನು ನಿರ್ಣಯಿಸಿಕೊಳ್ಳಬೇಕು. ಅವರು ಪ್ರಕಟಿಸಿದ ಕೆಲವು ಹುಚ್ಚಾಟಗಳ ಸಾರಸಂಗ್ರಹವಿದು.

**ದೆವ್ವನ ಮನೆ:—** ದೆವ್ವನ ಮನೆಯಲ್ಲಿರುವೆವೆಂಬ ಸಂಶಯ

ದಿಂದಲೂ ಅಚಾತುರ್ಯದ ಸಂಸಾರದಿಂದಲೂ ಬಳಲಿ ಕಂಗೆಟ್ಟು, ಪ್ರೌಢ ವಯಸ್ಸಿನಲ್ಲಿಯೇ ವೃದ್ಧಾಪ್ಯವನ್ನು ತಂದುಕೊಂಡ ಸತ್ಯವಂತ ರಾಯನು, ತನ್ನ ಹೆಂಡತಿಯ ದೆವ್ವ ಬಿಡಿಸಬೇಕೆಂದು, ಜ್ಯೋತಿಷಿ, ಸಾಮುದ್ರಿಕ. ಬುಡಬುಡಕಿ, ವೈದ್ಯ, ಹಕೀಮ, ಮಾಂತ್ರಿಕ ಮೊದಲಾ ದವರಿಗೆಲ್ಲ ಆಮಂತ್ರಣವಿತ್ತು ಬಂದಿರುತ್ತಾನೆ. ಆ ಮನೆಯ ಪರಿಸ್ಥಿತಿ—ಅಲ್ಲಿ ಕುಳಿತರೆ ಭೀತಿ, ಇಲ್ಲಿ ಕುಳಿತರೆ ಭಯ, ಅತ್ತ ಕುಳಿತರೆ ಮರಣ, ಇತ್ತ ಕುಳಿತರೆ ಸಾವು ಎತ್ತ ಕುಳಿತರೂ ಎಲ್ಲಿ ಕುಳಿತರೂ ಹೆದರಿಕೆಯೇ ಹೆದರಿಕೆ. ತಾಯಿ ಹಾಡಿದರೆ ನಾಯಿ ಅತ್ತಂತೆ, ಚಿಕ್ಕ ಕೂಸು ಅತ್ತರೆ ಬೆಕ್ಕು ಒದರಿದಂತೆ, ಹೆಂಡತಿ ಮಾತನಾಡಿದರೆ ಜಗಳಾಡಿದಂತೆ, ಯಜಮಾನನ ರೀತಿನಡತೆಯೆಲ್ಲ ಭ್ರಾಂತಿಯಾದವರಂತೆ ಆಗಿಬಿಟ್ಟಿತ್ತು. ಯಜಮಾನನು ಸಂಬಳವಿದ್ದೂ ದುಡ್ಡಿಲ್ಲದವ; ತಾಯಿಯಿದ್ದೂ ಪರದೇಶಿ; ಹೆಂಡತಿಯಿದ್ದೂ ಸನ್ಯಾಸಿ; ಮಕ್ಕಳಾಗಿಯೂ ಸಂತತಿ ಬೆಳೆದಿಲ್ಲ. ಅತ್ತೆಯ ಮೇಲೆ ಚವರಾಬೀಸುವಂತೆ ಕಸಬರಿಗೆ ಎತ್ತಿದ ಸೊಸೆ, ಸೊಸೆಗೆ ಆರತಿ ಬೆಳಗಿದಂತೆ ಕೊಳ್ಳಿ ಹೊಡೆಯು ಬರುವ ಅತ್ತೆ. ಈ ಕಾಟವು ಗುರುವಾರ ಶನಿವಾರ ಮಾಡಿದರೂ, ದೇವರು ದಿಂಡರು ಮಾಡಿದರೂ, ಕರೆವ್ವ ಕಂಟೆವ್ವ ಮಾಡಿದರೂ, ಜಪಗಿಪ ಮಾಡಿದರೂ ಹೋಗಿರಲಿಲ್ಲ. ಮದುವೆಯಾಗಿ ಹತ್ತರ ಮೇಲೆ ಮೂರು ವರುಷಗಳಾದರೂ ಮೂಕಸನ್ನೆಯ ಮೇಲೆ ಪ್ರಪಂಚ ಸಾಗಿತ್ತು. ಮೊದಮೊದಲು ಅಮಾಸಿ-ಹುಣ್ಣಿವೆ ನೋಡಿ ಬರುವ ದೆವ್ವ ಬರುಬರುತ್ತ ಪ್ರತಿದಿನವೂ ಬರತೊಡಗಿತು. ಕೈನೋಡಿ ನೋಡಿ ಕಣ್ಣುಮುಂದವಾಗಿ ಬಿಟ್ಟ ಕನ್ನಡಕದವ ಬಂದು ಹೋದನು; ನಷ್ಟಜಾತಕ ಬರೆಯುವ ಶಾಸ್ತ್ರೀ ಬಂದು ಹೋದನು. ಸತ್ಯವಂತರಾಯನ ಮೋರೆ ನೋಡಿದ ಕೂಡಲೇ 'ಕನ್ಯಾರಾಸಿ'ಯೆಂದು ಹೇಳಿದರು. ಅಂದರೆ ಹೆಣ್ಣಿನ ಸಂಬಂಧ ಅವರು ಹೋಗುವಷ್ಟರಲ್ಲಿ "ಪರಮೇಶ್ವರ ಹುಟ್ಟಿಸಿದ ಒಬ್ಬ ಮನುಷ್ಯ' ಬರುತ್ತಾನೆ; ಅವನ 'ನಾಮ ಸಿದ್ಧಮೂರ್ತಿ.' ಅವನು ಹೇಳುತ್ತಾನೆ—'ಸತಿ ಎಂದರೆ ಪಥಿಯ ಅರ್ಧಾಂಗ. ತಮ್ಮ ವಾಮಾಂಗದಲ್ಲಿ ಕಾಮಾಂಗ ಚಲಿಸಿ ಪ್ರೇಥದ ಸಂಪರ್ಕವಾಗಿ ಭಾರ್ಯೆಗೆ ಭೂತಬಡಿದುಕೊಂಡಿದೆ.' ರಂಗ ಹೊಯ್ಯ

ಲಿಕ್ಕೆ ಕಾಂಭಾಣ ಕೇಳುತ್ತಾನೆ. ಹೀಗೆ ಯಾರಾರೋ ಬಂದು ಬಂದು ಹೋದ ಮೇಲೆ ಹಕೀಮ ಬಂದು ಅಲ್ಲಿರುವ ಜನರನ್ನು ಏಕ್, ದೋ, ತೀನ್, ಚಾರ್ ಎಂದು ಎಣಿಸಿ ರೋಗಿ ಇದಾನೋ? ಏನು........? ಎಂದು ಕೇಳುತ್ತಾನೆ. ಯಂತ್ರ ಕಟ್ಟುವವನೂ, ಬೆಳಕುಕೊಟ್ಟು, ನೀರು ಕೊಟ್ಟು, ಮಣ್ಣುಕೊಟ್ಟು ನೋಡಬೇಕೆನ್ನುವವನೂ ಬರುತ್ತಾರೆ. ಭೂತ ನಾಡಿ ಆರತಾ ಇದ್ದರೆ ಇಡಿದು ನೋಡಿ ಏಳುವವನೂ ಬರುತ್ತಾನೆ. ಇದೆಲ್ಲದರ ಹುಚ್ಚುಚ್ಚಾರವು ಗುರುರಾಯನೆಂಬ ಚಾಣಾಕ್ಷನಿಂದ ಬಗೆ ಹರಿಯುತ್ತದೆ. ತಾಯಿಯನ್ನು ತೀರ್ಥಕ್ಷೇತ್ರಗಳಿಗೆ ಕಳಿಸುವ ಎತ್ತುಗಡೆ ನಡೆದದ್ದನ್ನು ಕೇಳಿ ಆಕೆ ಒಳಗೆ ಕುಳಿತಲ್ಲಿಯೇ ಹಿಗ್ಗಿದಳು; ಸೊಸೆಯೂ ಹೊರೆಯೇರಿದಳು. ಯಾಕಂದರೆ—ಈ ಮನೆಯಲ್ಲಿ ನನ್ನದೇನೂ ನಡೆಯ ಲೊಲ್ಲದಲ್ಲವೆನ್ನುವುದೂ ನಿತ್ಯದ ಕಲಹಕ್ಕೆ ಒಂದು ಕಾರಣವಾಗಿತ್ತು. ದೆವ್ವನ ಮನೆ ಬಿಡುವ ನಿಶ್ಚಯದಿಂದಲೂ, ಹೆಂಡತಿಗೆ ಹಡೆಯುವ ಕೆಲ ಸದಿಂದ ರಜೆಕೊಡುವದರಿಂದಲೂ ಅವರ ಅನಿಷ್ಟಗಳೆಲ್ಲ ನಿವಾರಣೆ ಯಾಗುವವೆಂದು ಗುರುರಾಯನ ಸೂಚನೆ. 'ನಿನ್ನ ಸ್ಥಿತಿ ನಮ್ಮ ಭರತ ಖಂಡದ ರೀತಿ ಎರಡೂ ಒಂದೇ ಆಗಿವೆ. ಯಾವುದೋ ರೋಗಕ್ಕೆ ಏನೋ ಕುಂಟು ಮದ್ದುಗಳನ್ನು ಕೊಡುತ್ತ ದೇವರ ಭೂಮಿ ದೆವ್ವನ ಮನೆಯಾಗಿ ಬಿಟ್ಟಿದೆ. ಆದರ ಪಡಿಯಚ್ಚೇ ಮನೆಮನೆ ಆಗಿದೆ'' ಎನ್ನುವ ಮಾತೇ ಭರತವಾಕ್ಯ.

**ಹಳೆಯ ಗೆಣೆಯರು:—** ಮಾಯಾತೀತನಾದ ಗಡ್ಡದವನಿಗೂ, ಹರಿದಾಸನಾಗಿರುವ ಕೋಲಿನವನಿಗೂ ಒಂದು ಬಯಲು ಸ್ಥಳದಲ್ಲಿ ಭೆಟ್ಟಿಯಾಗುತ್ತದೆ. ಒಬ್ಬ ಕಪ್ಪು ಕೋಣ; ಇನ್ನೊಬ್ಬ ಕೆಂಪು ಕೋಡಗ. ಅವರು ಮೊದಲು ಅಪರಿಚಿತರಾದರೂ ದರ್ಶನದಿಂದ ಅವರ ಪರಿಚಯ ವಾಗುವದು. ಕೋಲಿನವನ ಕುಚೇಷ್ಟೆಯಿಂದ ಕೋಲು, ಕುಳಿತ ಯಮ ವಾಹನನಿಗೆ ತಗುಲಿತು. ಅವನು 'ಕೋಲಿಗಿಂತ ಮೊಳ ಎತ್ತರವಿದ್ದು ಉದ್ದನ್ನವರಿಗೆ ಬುದ್ಧಿ' ಯೆನ್ನಲು; ಮತ್ತೊಬ್ಬನು–'ನಿಮ್ಮ ಸುತ್ತಳತೆ ಹೇಳಬೇಕಾದೀತು' ಎನ್ನುವನು. ಇದೇ ಪರಿಚಯಕ್ಕೆ ಆರಂಭ. ಗಡ್ಡ ದವನು ರಿಟಾಯರ್ಡ ಪೋಲೀಸ್ ಸಬ್ ಇನ್ಸಪೇಕ್ಟರ್‌ನೆಂದೂ, ಕೋಲಿ

ನವನು ಸಬ್‌ಜಜ್ಜನೆಂದೂ ತಿಳಿಯಿತು. ತಂತಮ್ಮ ಸರ್ವಿಸಿನಲ್ಲಿ ಪರಸ್ಪರರನ್ನು ಒಮ್ಮೊಮ್ಮೆ ನೋಡಿದ ನೆನಪು ಇಬ್ಬರಿಗೂ ಬರಹತ್ತಿತು. ಹರಿದಾಸರು ಯಾರ ಕೂಡನೋ ಜೇಜೂರಿ ಖಂಡೋಬನಿಗೆ ಬಂದಿದ್ದರೆಂದೂ, ಮಾಯಾತೀತರು ಆದರಂತೆ ಪಂಡರಪುರಕ್ಕೆ ಬಂದಿದ್ದರೆಂದೂ ಗೊತ್ತಾಗುವದು. ಮಾಯಾತೀತರ ಮೊದಲಿನ ಹೆಸರು ವಿಶ್ವಾಸರಾಯ; ಹರಿದಾಸರ ಮೊದಲಿನ ಹೆಸರು ಪದ್ಮನಾಭ. ಆ ಕಾಲದಲ್ಲಿ ಅವರಿಬ್ಬರವಳಾದ ಸುಂದರಾಬಾಯಿಯ ಡೊಳ್ಳುಹೊಟ್ಟೆ, ಪೊಳ್ಳುಪ್ಪೈ, ಗುಳ್ಳಗಣ್ಣು, ಅಡಿಕೆ ತುರಬು ನೆನಪಾಗದಿರಲಿಲ್ಲ. ಆದರೆ ಈಗ ಮಾತ್ರ ಪದ್ಮನಾಭರು ಭಕ್ತಿಸೂತ್ರ, ಭಗವದ್ಗೀತೆ, ಭಾಗವತ ಓದುತ್ತಿದ್ದೇವೆಂದೂ; ವಿಶ್ವಾಸರಾಯರು ಬ್ರಹ್ಮಸೂತ್ರ, ಯೋಗವಾಸಿಷ್ಠ; ರಾಮಾಯಣ ಓದುತ್ತಿದ್ದೇವೆಂದೂ ಹೇಳಿಕೊಳ್ಳುತ್ತಿದ್ದಾಗ ಕರ್ಮಧರ್ಮ ಸಂಯೋಗದಿಂದ ಸುಂದರಾಬಾಯಿ ಆ ದಾರಿಯಿಂದ ಹೊರಟಿರುವವನ್ನು ಕಂಡರು. ಅವಳೂ ಕಂಡಳು; ಗುರುತಿಸಿದಳು. ಆಕೆ ತಾನು ಮೊನ್ನೆ ಪಂಡರಪುರದಲ್ಲಿ ಹಿಂದನದೆಲ್ಲ ಗುರುವಿನೆದುರು ಒಪ್ಪಿಕೊಂಡು ದೀಕ್ಷೆ ತೆಗೆದುಕೊಂಡೆನೆಂದು ಹೇಳಿದಳು. ಅವರು ಕಕ್ಕಾವಿಕ್ಕಿಯಾದರು; ತಮ್ಮದೇನೇನು ಹೊರಬಿದ್ದಿತೋ ಎಂದು. ಆದರೆ ಆಕೆ ಆಗಲೆ ಅಪ್ಪಣೆ ತಕ್ಕೊಂಡು ಹೋದಳು. 'ಸೌಂದರ್ಯ ಲಹರಿ' ಓದುವ ವಿಶ್ವಾಸರಾಯರೂ; ಗೋಪೀಗೀತದ ಪದ್ಮನಾಭರೂ—“ಇನ್ದುದನ್ನು ಒಪ್ಪಿಕೊಂಡು ಬಿಡಬೇಕೇ? ನಾಚಿಕೆಗೆಟ್ಟ ಹೆಂಗಸು!” ಎನ್ನುತ್ತ ಕುಳಿತರು.

**ಸಾಯೋ ಆಟ:**—ನೃತ್ಯದೇವತೆಯ ಪ್ರಾರ್ಥನೆ ಮುಗಿದ ಬಳಿಕ ಸಭಿಕರಿಗೆ **ಎರಡೂ** ಕೈ ಜೋಡಿಸಿ ಸೂತ್ರಧಾರನು ಹೇಳಿಕೊಳ್ಳುವಾಗ ಅವನ ಗೆಳೆಯನು ಬಂದು, ಒಳಗೆ ಕಳ್ಳನು ಕನ್ನಕೊರೆಯುವಷ್ಟರಲ್ಲಿ ಗೋಡೆಬಿದ್ದು ಸಾಯುವ ಪ್ರಸಂಗ ಬಂದಿದೆ. ಒಂದು ಪದ ಹೇಳಿ ಸಾಯುಬೇಕೆನ್ನುತ್ತಾನೆ ಬೇಗನೆ ಒಳಗೆ ಬಾ ಎಂದು ಕರೆಯುತ್ತಾನೆ. ಕಳ್ಳನ ಹೆಂಡತಿಯು ಗಂಡನಿಗಾಗಿ ಅಳುವುದಕ್ಕೆ ಬೇಸತ್ತು—ಕೇಳುವ ಜನರಿದ್ದರೆ ಅತ್ತರೆ ಸಾರ್ಥಕವೆಂದು ತಡೆದು ಹಿಡಿದವಳು ಬೆಳಗಾಗುವದಕ್ಕೆ ಮತ್ತೆ ಆರಂಭಿಸಿದಳು. ಆ ಸ್ವರಕೇಳಿ ಗೃಹಸ್ಥನೊಬ್ಬನು

ಹೊರಗೆ ಬರುವನು. ಅನಾಥೆಗೆ ಸಹಾಯ ಮಾಡುವ ಉದ್ದೇಶದಿಂದ ಆತನು ಕೊತವಾಲನನ್ನು ಕರೆಯು ಹೋಗುವನು. ಆದ ಸಮಾಚಾರವ ನ್ನೆಲ್ಲ ಕೊತವಾಲನು ಗೃಹಸ್ಥನಿಂದ ಕೇಳಿ, ಅಲ್ಲಿಗೆ ಬಂದನಾದರೂ ಆ ಗೃಹಸ್ಥನನ್ನು ಬಿಡಲಿಲ್ಲ. ಬೇರೊಬ್ಬ ಅಪರಾಧಿ ಸಿಗುವವರೆಗೆ ಆವ ನನ್ನು ಬಿಡುವುದು ಹೇಗೆ? ಕಳ್ಳಿ ಕೇಳಿಕೊಂಡಳು—ಮನೆಯುವರಾರಾ ದರೂ ನನ್ನನ್ನು ಮದುವೆಯಾಗಬೇಕು; ಇಲ್ಲವೆ ಪ್ರಾಣಕ್ಕೆ ಪ್ರಾಣವೆನ್ನು ವಂತೆ ಮನೆಯ ಯಜಮಾನನ ಪ್ರಾಣ ತೆಗೆದುಕೊಳ್ಳಬೇಕು. ಅದೇ ಹೊತ್ತಿಗೆ ದಿವಾಣರೂ ಸಂಸ್ಥಾನಿಕರೂ ಅಲ್ಲಿಗೆ ಬರುವರು. ಅವರು ಸಹ ಕಳ್ಳಿಯ ಬೇಡಿಕೆಯು ನ್ಯಾಯವಾದುದೆಂದು ಸಮರ್ಥಿಸಲು 'ಕಳವು ಮಾಡಬಂದವರಿಗೇನು ಶಿಕ್ಷೆ?" ಎಂದು ಗೃಹಸ್ಥನು ಪ್ರಶ್ನಿಸಿದನು. "ಕಳ್ಳನಿಗಂತೂ ದೇಹಾಂತ ಶಿಕ್ಷೆಯಾಗಿದೆ; ಆಕೆ ಅನಾಥೆಯಾಗಿದ್ದಾಳೆ" ಇದು ದೊರೆಯ ಉತ್ತರ. ತನಗಿನ್ನು ಮರಣ ಶಿಕ್ಷೆ ಇಲ್ಲವೆ ಕಳ್ಳಿಯೊಡನೆ ಲಗ್ನ ತಪ್ಪದೆಂದು ತಿಳಿದು ಗೃಹಸ್ಥನು—ನಿಜವಾಗಿ ಗೋಡೆಗೆ ಶಿಕ್ಷೆಯಾ ಗಬೇಕೆಂದನು; ಅದರಿಂದಲೂ ಪಾರಾಗುವ ಲಕ್ಷಣ ತೋರಲಿಲ್ಲ; ಉಪ್ಪಾರನಿಗೆ ಶಿಕ್ಷೆಯಾಗಬೇಕೆಂದನು. ಉಪ್ಪಾರನನ್ನು ಕರೆಯುಹೋದ ಕೊತವಾಲನ ಕೈಗೆ ಒಬ್ಬ ಕೂಲಿಯುವನು ಸಿಗಲು ಅವನನ್ನು ಹಿಡಿತರ ಲಾಯಿತು. ಅವನು ಅಂಜಿ ಮೂರ್ಛೆ ಹೋಗಿ ಬಿದ್ದುಕೊಂಡದ್ದು, ಲಗ್ನಕ್ಕೆ ಸಿದ್ಧನಾದನೆಂದು ದಿಂಡುರುಳಿಕೆ ಹಾಕುವ ಲಕ್ಷಣವೆಂದು ತೀರ್ಮಾನವಾಯ್ತು. ಬಹಳ ಹೊತ್ತಿನ ಮೇಲೆ ತಾನು ಉಪ್ಪಾರನಲ್ಲ ವೆಂದು ಹೇಳಿದನು. 'ಹಾಗಾದರೆ ಏಕೆ ಬಂದಿ?' ಎಂದು ದೊರೆಯ ಪ್ರಶ್ನೆ. 'ಉಪ್ಪುಕಾರು ಹಚ್ಚಿ ಮಾತಾಡುವನಾದ್ದರಿಂದ ಉಪ್ಪಾರನೆಂದು ತಿಳಕೊಂಡೆ'ನೆಂದು ಕೊತವಾಲನ ಉತ್ತರ. ಕಡೆಗೆ ನೆರೆದುನಿಂತವ ರಲ್ಲಿ ಸೂಳೆಯನ್ನು ತೋರಿಸಿ ಕೂಲಿಕಾರನು ಕಡೆಗಾಗುವನು. ಸೂಳೆಗೂ ಕಳ್ಳಿಗೂ ಲಗ್ನ ಮಾಡುವುದೆಂದು ಯೋಚಿಸುವರು. ಅದು ಅವ್ಯವಹಾ ರ್ಯವೆಂದು ಒಬ್ಬ ಸನ್ಯಾಸಿಯನ್ನು ಮರಣ ಶಿಕ್ಷೆಗೆ ಸಿದ್ಧಪಡಿಸಿದರೂ ಆ ಸನ್ಯಾಸಿಯ ಶಿಷ್ಯರ ಯುಕ್ತಿಯಿಂದ ರಾಜನೂ, ದಿವಾನನೂ ತಾವಾ ಗಿಯೇ ಮರಣ ಶಿಕ್ಷೆಗೆ ಈಡಾಗುವರು. ಹೀಗೆ ಮೊದಲೇ ತಿಳಿಸಿದಂತೆ ಮೂರು ಹೆಣಗಳು ಸ್ಟೇಜಿನ ಮೇಲೆ ಬೀಳುವವು. ಹೀಗಿದು ಟ್ರಾಜಡಿ!

**ತಿರುಕರ ಪಿಡುಗು**:—ಮಿ. ನಾಯಕರೇ ಈ ನಾಟಕದ ನಾಯಕರು. ತಮ್ಮೂರಿನಲ್ಲಿ ಪ್ಲೇಗಿನ ಪಿಡುಗಿರುವದೆಂದು, ಇನ್ನೊಂದೂರಿನ ಒಂದು ಬಂಗಲೆಯನ್ನು ಬಾಡಿಗೆಯಿಂದ ಹಿಡಿದು, ಸ್ವಚ್ಛವಾದ ಗಾಳಿ-ಬೆಳಕು ಬರಲೆಂದು ಕಿಡಿಕಿ ಬಾಗಿಲುಗಳನ್ನು ತೆರೆದಿಟ್ಟರೆ ಎಲ್ಲ ಕಡೆಯಿಂದಲೂ ತಿರುಕರು ಬಂದು ನೆರೆದು ಬೇರೊಂದು ಪಿಡುಗನ್ನೇ ತಂದಂತೆ ಮಾಡ್ತಿದರು. ಮಿ. ನಾಯಕರು ದೈವುಳ್ಳವರು; ಅವರು ಉಪಯೋಗಿಸುವ ತೈಲ, ಸ್ನೋ, ಕ್ರೀಮು, ಸಾಬಾಣಗಳನ್ನೂ, ಫೋನೋ, ಹಾರ್ಮೋನಿಯಂ, ಗಡಿಯಾರಗಳನ್ನೂ ನೋಡಿದರೆ ಖರ್ಚಿಗರೆಂದು ತೋರುವದು. ತಮ್ಮೊಬ್ಬರಿಗಾಗಿಯೇ ಕಾಲ್ಮರಿ, ಸ್ಲೀಪರ್ಸು, ಶೂ, ಕ್ಯಾನವ್ಹಾಸ್ ಶೂ ಇಟ್ಟಿದ್ದನ್ನು ನೋಡಿದರೆ ತುಸು ಮಂದುಗಾರರೆಂದೂ ತೋರುವದು. ಆದರೆ ತಿರುಕರನ್ನು ಕಂಡರೆ ಅವರ ಪ್ರತಿಭೆ ಉಕ್ಕುವದು. "ಬಡಸೂಳೇಮಕ್ಕಳೂ ಭಡಾಭಡಾ ಊರು ಬಿಡಬೇಕೇ? ಸಾಯೋ ಚಿಂತೆ ಇವರಿಗ್ಯಾಕೆ? ಇವರಿಗೆ ಇರೋ ಚಿಂತೆ ಇರಬೇಕು. ತಣ್ಣಗೆ ಪ್ಲೇಗಿನಿಂದ ಯಾಕೆ ಸತ್ತಾರು, ಹೊಟ್ಟೆಗಿಲ್ಲದೆ ಉಪವಾಸ ಸಾಯುವದನ್ನು ಬಿಟ್ಟು." ಎನ್ನುವ ವಿಚಾರಸರಣಿ ಅವರದು. ಅವರ ಮಾರ್ನಿಂಗ್ ಟಾಯಿಂಟೆಬಲ್ ಮಾತ್ರ ನಾಟಕದಲ್ಲಿ ಕಾಣಸಿಕ್ಕುತ್ತದೆ. ಹಲ್ಲು ತಿಕ್ಕುವುದು, ಚಹಾ, ಕೈಕಾಲು, ಹಜಾಮತಿ, ಹೇರ್ ಡ್ರೇಸಿಂಗು ಇತ್ಯಾದಿ. ಏಳುಗಂಟೆಗೆ ಸರಿಯಾಗಿ ಬುಡಬುಡಕಿ ಬರುವನು; ಅವನ ಮೇಲೆ ಜೈಗಳುಮಳೆ ಸುರಿಸಿ—"ನಿನಗೆ ಬೇಕು ಜೋಳ; ನಾವು ಗೋದೀ ಕೂಳು ತಿಂಬವ್ರು; ರೊಕ್ಕ ಅಂದ್ಯಾ? ಬ್ಯಾಂಕಿನಾಗ ಅವ." ಈ ಮೊದಲಾದ ನಿರ್ಣಯ ಹೇಳುವನು. ಲಕ್ಷ್ಮೀ ವೆಂಕಟೇಶಾಯನಮಃ ಎನ್ನುತ್ತ ಬಂದ ಆಚಾರ್ಯರನ್ನು ಕುರಿತು—ತಿರುಪತಿ ವೆಂಕಟೇಶಗ ನಾಚಿಕಿದ್ದರೆ ನಿಮಗೆ ಇರಬೇಕು ಎನ್ನುವನು. ಶುಕ್ಲವೃತ್ತಿಗಾಗಿ ಬಂದ 'ವಿಧವೆಗೆ—'ಏನ್ರೀ ಆಗ್ಲೆ ಬಂದವರು ನಿಮಗ?' ಎಂದು ಕುಚೇಷ್ಟೆಮಾಡಿ, ಸಹಗಮನದ ಸಲಹೆ ಕೊಡುವನು; ಅದನ್ನು ನಿಲ್ಲಿಸಿದ ಸರಕಾರದ ಮೇಲೆ ಫೋಟಗೀದಾವೇ ಮಾಡಿರೆನ್ನುವನು. ದಾಸಯ್ಯ ಬಂದು ಶಂಖವೂದಲು—"ನಮ್ಮ ಮನೀ ಎದುರ್ಗೆ ಶಂಖಾ ಹೊಡೀಬ್ಯಾಡ. ಅಗಸೀ ಎದುರ್ಗೆ ಹೊಡಿ"

ಎಂದು ಕಳಿಸುವನು. ಜೋಗಿತಿ ಬರುವಳು—"ಸೂಳಿ ಮುಪ್ಪಾಗಿ ಜೋಗ್ತಿ ಆಗ್ತಾಳ ಅಂತಾರ. ಇದು ತಿರಕೊಂಡು ತಿಂದ ಮೈಯೇ? ಹರೇದವರನ್ನ ಮುರಕೊಂಡು ತಿಂದ ಮೈ" ಎಂಬ ಉಡುಗೊರೆ ಅವಳಿಗೆ. ತಂಬೂರಿಯ ದಾಸಯ್ಯ ಬರುವನು. "ಅಪ್ಪನ ಧನಿ ಕೇಳಿದರ ಗೋಣ ಮುರಿಸಿಕೊಂಡ ಸರಸ್ವತಿ ಅತ್ತಾಂಗ ಆಗ್ತದ. ತಲೀಬುರಡಿಯಂಥಾ ಕುಂಬಳ ಕಾಯಿ, ಸುಡುಗಾಡದಾಗಿನ ಬಿದಿರು. ನಾಕು ತಂತೀ ಒಳಗ ಮೂರೂವರಿ ತಂತಿ ಹರಿದಾವ. ಮೇಲಿ ತಂಬೂರಿ." ಆ ಮೇಲಿ ಕೋರಾನ್ನಕ್ಕೆ ಜಂಗಮನೂ, ವಾರದೂಟದ ಹುಡುಗನೂ, ಸೈಕಲ್ಲು ಹತ್ತಿದ ದೇಶಸೇವಕನೂ ಬಂದು ಒಯಿಸಿಕೊಂಡು ಹೋಗುವರು. ಜೋಸಿಗ ಬರಲಿ, ಮಾಧುಕರಿ ಹುಡುಗ ಬರಲಿ. ಯಾರ ಮೇಲೆಯೂ ಕರುಣವಿಲ್ಲ; ಬಿಡಯವಿಲ್ಲ. ಗೊಲ್ಲರಾಕೆ ಕರಿಮೋರೆಯ ಮಗುವನ್ನೆತ್ತಿಕೊಂಡು ಬರುವಳು—"ಅಲ್ಲಿ ಕಾಲಿಡ ಬ್ಯಾಡಾ, ಕಲ್ಲು ಎಲ್ಲ್ಯಾರೆ ಕೊಳತಾವು" ಎಂದು ಎಚ್ಚರಿಸುವನು. ಅವಳ ಮೈಬಣ್ಣ ನೋಡಿ–"ಇವರ ಅವ್ವಾ ಬಸುರಿದ್ದಾಗ, ಅಮಾಸೀ ದಿನ, ಮಧ್ಯ ರಾತ್ರಿಯೊಳಗ, ಮುಸುಕು ಹಾಕಿಕೊಂಡು ಡಾಂಬರಿನೊಳಗ, ಇದ್ದಲೀ ತೆಯ್ದು, ಬಯಕೀ ತೀರಿಸಿಕೊಳ್ಳಲಿಕ್ಕೆ ಕುಡಧಂಗ ಕಾಣ್ತದ........ಸಾಕಾಗ್ದ ವ್ಯಾಲೆ ಹಿಡೀ ಕರಿಬಟ್ಟೊ, ಹತ್ತುಕೇರೂ ತಿಂದಿರಬೇಕು" ಎನ್ನುವನು. ಕಿಂದರಿ ಜೋಗಿಯು ಇಲಿಗಳನ್ನೆಲ್ಲ ಒಯ್ದು ಹೊಳೆಗೊಯ್ದು ಮುಳುಗಿಸಿ ಬಂದಂತೆ "ಭಿಕ್ಷುಕೋತ್ಪಾಟನ ಸಂಘ" ಅಂತೇನಾದರೂ ಸಂಘ ಸ್ಥಾಪಿಸಿ ತಿರುಕರ ನಿರ್ಮೂಲ ಮಾಡಿ ಸಾಮಾಜಿಕ ಸೇವೆ ಮಾಡುವ ವಿಚಾರ ಬರುವದು. ಆದರೆ ಮಧ್ಯಾಹ್ನವಾಗಿದ್ದರಿಂದ ಮೊದಲು ಉದರ ಸೇವೆಗೆ ತೆರಳುವನು. ತಿರುಕರು ಹೆಚ್ಚಾಗಿ ಉಳ್ಳವರಿಗೆ ಸಹ ತಿನ್ನಗೊಡರು; ದೈವುಳ್ಳವರಿಗೆ ದಯವೇ ಇಲ್ಲವಲ್ಲ! ಎಂದೇನೋ ಮಾತನಾಡಿ 'ಒಬ್ಬ'ನು ಮುಗಿಸುವನು.

**ಜಾತ್ರೆ:**—ಹುಚ್ಚಾಪುರದಲ್ಲಿ ಪ್ಲೇಗು ಆರಂಭವಾಗಿದ್ದು, ಅದೇ ಕಾಲದಲ್ಲಿ ಆ ಊರ ಜಾತ್ರೆ ಬೇರೆ ಬಂದಿರುತ್ತದೆ. ಜಾತ್ರೆ ನೆರೆದರೆ, ದೊರೆಗೆ ಉತ್ಪನ್ನ. ಪ್ಲೇಗವೆಂದರೆ ಅದು ಇಲ್ಲದಾಗುತ್ತದೆ. ದೊರೆ ತುಸು ಚಾಹುಮಾರಾಜರೇ. "ದೈವುಳ್ಳವರು ಕಳ್ಳರು-ಕಾಕರಿಗೆ ಹೆದರಬೇಕು.

ರೋಗವ ಹೆಸರಿಕೆಯೋ ಅವರಿಗೆ?" ಎಂಬ ಕೇಳುವನು. ಬಿದ್ದ ಇಲಿ ಯನ್ನು ಸ್ಥಾನಿಕ ಡಾಕ್ಟರರು ಪರೀಕ್ಷಿಸಿದರೆ ಆಗದು; ದಿಲ್ಲಿಯಿಂದಲೇ ಪರೀಕ್ಷೆಯಾಗಿ ಬರಬೇಕು! ಕೊನೆಗೆ ಹಾಗೂ ಆದಾಗ—'ಇಲ್ಲಿಯ ಇಲಿ ಯದು; ದಿಲ್ಲಿಗೇನು ತಿಳಿಯುವದು?' ಎಂದು ನುಡಿದು, ಯಾರೂ ಊರ ಬಿಡಬಾರದೆಂದೂ ಜಾತ್ರೆ ಆಗೇ ಆಗುವದೆಂದೂ ಡಂಗುರ ಹೊಡೆಸಲು ಕಾರಭಾರಿಗೂ, ಕಾರಭಾರಿಯು ಕಾರಕೂನನಿಗೂ, ಕಾರಕೂನನು ಇನ್ನಾ ರಿಗೋ ಹೇಳಿ ದೊರೆಯ ಹುಕುಮನ್ನು ಅಮಲಿನಲ್ಲಿ ತರುವರು. ಆದರೆ ಪ್ಲೇಗು ಭರದಿಂದ ಹಬ್ಬುತ್ತ ಊರಲ್ಲಿ ಸಾಯುವ ಸಂಖ್ಯೆ ಮಿತಿಮೀರಿತು. "ಸಾಯುವ ಮಹಾರಾಯರು ಜಾತ್ರೆಯಾಗುವವರೆಗೆ ತಡೆದಿದ್ದರೆ ಪ್ರಾಣ ಹಾರಿಹೋಗುತ್ತಿತ್ತೇ?—ಅತ್ತರೇನು ಸತ್ತವ ಕೇಳುವದಿಲ್ಲ. ಈ ಹುಂಬ ಮಂದಿಗೆ ಏನೂ ತಿಳಿಯುವದಿಲ್ಲ" ಎಂದು ಸಿಡಿಮಿಡಿಗೊಳ್ಳುವ ದೊರೆಯ ಮೈಯೇ ಬೆಚ್ಚಗಾಗುವದು. ಡಾಕ್ಟರರಿಗೆ ಕೇಳಿದರೆ—ಪ್ಲೇಗ ಎಂಬ ದೊರೆಯ ಅಪ್ಪಣೆಯಿಲ್ಲದೆ ನುಡಿಯುವುದು ಹೇಗೆ? "ದೊರೆಗಳ ಮೈ" ಎನ್ನುವರು. "ನಾಡಿ ಇಷ್ಟೇಕೆ ಹಾರುತ್ತವೆ?" ಎಂದು ದೊರೆ ಪ್ರಶ್ನಿಸಲು "ರಾಜನಾಡಿ! ರಣಾಂಗಣಕ್ಕೆ ಹೊರಟ ಕುದುರೆಯಂತೆ" ಎಂಬ ಡಾಕ್ಟ ರರ ಉತ್ತರ. 'ಮೈನಡುಗುತ್ತಿದೆಯಲ್ಲ' ಎಂದರೆ 'ಅದು ಜಾತ್ರೆಯ ಉತ್ಸಾಹ' ವಿರಬೇಕು. ಅರಮನೆಯಲ್ಲಿಯೇ ಬಿದ್ದ ಇಲಿಗಳನ್ನು ತಂತಿ ಯಿಂದ ಮದ್ರಾಸಕ್ಕೆ ಕಳಿಸಲು ರಾಜಾಜ್ಞೆ! ಕಣ್ಣುರಿ, ಬಾಯಾರಿಕೆ ಹೆಚ್ಚಾಗಿ "ಇದು ಪ್ಲೇಗೇ ಇರಬೇಕು ಡಾಕ್ಟರರೇ" ಎಂದಾಗ "ಆ ಮಾತು ನಾನು ಹೇಗನ್ನಲಿ? ದೊರೆಗಳು ಹೇಳಬೇಕು" ಎಂದು ಡಾಕ್ಟರರ ಉತ್ತರ. "ಇನ್ನೇನು ದೇವರ ಜಾತ್ರೆಯೋ, ದೊರೆಗಳ ಪ್ರೇತ ಯಾತ್ರೆಯೋ?" ಎಂದು ಕಾರಭಾರಿಗಳಿಗೆ ದೊರೆಗಳೇ ಕೇಳಿ, ಊರು ಬಿಡಲಿಕ್ಕೆ ನಾಗರಿ ಕರಿಗೆ ಅಪ್ಪಣೆ ಕೊಡುವರು.

**ನಗೆ ಹೊಗೆ:—**ನಾಗವೇಣಿ ಉಂಡುಟ್ಟು ಸುಖವಾಗಿದ್ದ ವಿಧವೆ; ಆಕೆಯ ವಿಧವೆಯಾದ ಮಗಳು ಸುಂದರಿ. ಹರಟೆಯ ಮಲ್ಲಕ್ಕನಾದ ತಾರಾಬಾಯಿಯೂ, ಇನ್ನೊಬ್ಬ ವಿಧವೆಯಾದ ತಿಪ್ಪಮ್ಮನೂ ಬಿಡುವು ಮಾಡಿಕೊಂಡು ನಾಗವೇಣಿಯ ಮನೆಯಲ್ಲಿ ನೆರೆಯುವರು. ಅದು ವಿಧವೆ ಯರ ಮೇಳ; ಮೇಲಾಗಿ ಸುಖವಾಗಿದ್ದವರು. ನೆರೆಹೊರೆಯವರನ್ನಾಡಿ

ಕೊಳ್ಳುವುದೇ ಅವರ ಮಾತುಕತೆ. ವಿಶ್ವನಾಥರಾಯರೆಂಬ ಗೃಹಸ್ಥ ರಿಗೆ ಭಾಗೀರಥಿ ಎಂಬ ಮಗಳು. ದೊಡ್ಡವಳಾಗಿದ್ದರೂ ಅವಳ ಮದುವೆ ಆಗಿರಲಿಲ್ಲ. ಅದೇ ವಿಷಯದ ಪುರಾಣವನ್ನೇ ಆ ವಿಧವೆಯರು ಸೇರಿ ದಾಗ ಬಿಚ್ಚುವರು. ಭಾಗೀರಥಿಯು ಮೈನೆರೆದು ಬಿಟ್ಟಿದ್ದಾಳೆಂದು ತರ್ಕ ಅಂದಾಜುಗಳಿಂದ ಕಂಡುಹಿಡಿದಿದ್ದರಿಂದ ಆಕೆಯನ್ನು ಕುಮಾರ್ತಿ ಎನ್ನ ಗೊಡಬಾರದು. "ಕಚ್ಚೆಗೆ ಬಂದ ಹುಡಿಗಿ ಕುಮಾರ್‍ತಿ?" ಎಂದು ನಾಗ ವೇಣಿ ಪ್ರಶ್ನಿಸುವಳು. ಕೆಲವು ಹೊತ್ತಿನ ಮೇಲೆ ಸಹಜವಾಗಿ ಬಂದ ಗಂಗಾಬಾಯಿ ಅಂದರೆ ಭಾಗೀರಥಿಯ ತಾಯಿ ನಾಗವೇಣಿಯ ಮನೆಗೆ ಬಂದರೆ ಆಕೆಯನ್ನು ಯಾರೂ ಮುಟ್ಟಿಸಿಕೊಳ್ಳುವದಿಲ್ಲ. ಆ ವಿಚಿತ್ರವನ್ನು ಕಂಡು ಆಕೆ ಹೋಗಿ ಬಿಡುವಳು. ಆಗಲೂ ಒಂದೆರಡು ಮಾತಿನ ಸಣ್ಣ ಕಿಡಿ ಹಾರುವವು. ಸಂಜೆಗೆ ಸಾವಿತ್ರಿಯ ಪುರಾಣ ಕೇಳಲೆಂದು ಅವರೆ ಲ್ಲರೂ ನೆರೆಯುವರು, ಅಲ್ಲಿಯೂ ಭಾಗೀರತಿಯ ರಗಳೆಯೇ ರಗಳೆ. ಮನೆ ಯಲ್ಲಿ ಗಂಗಾಬಾಯಿ ತನ್ನ ಗಂಡನಿಗೆ—"ಹೋದಲ್ಲೆಲ್ಲ ನನ್ನ ತಲೆ ಕುಕ್ಕ ಹತ್ತಿದ್ದಾರೆ. ಊರ ಬಟ್ಟ ವರನ ಸಲುವಾಗಿ ಅಡ್ಡಾಡಿ ಬನ್ನಿರಿ. ಇಲ್ಲ ದಿದ್ದರೆ ನಾನು ಪ್ರಾಣವನ್ನೇ ಕೊಡುತ್ತೇನೆ" ಎನ್ನುವಳು. ಅವಳು ಹಾಗೆ ಹೇಳಲಿಕ್ಕೆ ಪುರಾಣಿಕರ ಬಾಯಿಂದ ಹೊರಟ "ಹೊತ್ತಿಗೆ ಮದಿವೆ ಮಾಡ ದವರು ಅವಾಚ್ಯ" ಎಂಬ ಶಬ್ದವೇ ಕಾರಣ. ಅಷ್ಟರಲ್ಲಿ ಯಾರೋ ಬಂದು— "ಆ ತಿರಕರ ಮುದುಕ ಜೀವಂತ ಇದ್ದಾನಲ್ಲ! ಗೊತ್ತು ಮಾಡಿಟ್ಟವರ! ಅವನಿಗೇ ಕೊಡಿರಿ" ಎಂದು ಚೇಷ್ಟೆ ಮಾಡುವನು. ಇಂಥವೆಲ್ಲ ಮಾತಿನ ಕೊಳ್ಳಿಗಳನ್ನು ಸಹಿಸದೆ ಭಾಗೀರಥಿ ಮೈಮೇಲೆ ಚಿಮಣಿ ಎಣ್ಣೆ ಸುರವಿ, ಬೆಂಕಿ ಹಚ್ಚಿಕೊಂಡು ದುರ್ಮರಣಕ್ಕೆ ಈಡಾಗುವಳು. "ಆಕೀ ಮದಿವಿ ಅಂದ್ರ ನಮಗೆಲ್ಲ ನಗೀ ಆಗಿತ್ತು; ಕಡೀಕ ಆಕೀಗ ಹೊಗೀ ಆತು" ಎಂದು ತಂದೆ ನುಡಿಯುವನು.

**ಉದ್ಧಾರ:—** ಸುಧಾರಕರಾದ ಕೋದಂಡರಾಯ ವಕೀಲರೂ, ಸ್ಪರ್ಶಾನಂದ ಸ್ವಾಮಿಗಳೂ ಅಸ್ಪೃಶ್ಯೋದ್ಧಾರ ಮಾಡಲು ನಿಲ್ಲುವರು. ತಂತಮ್ಮ ಮನೆತನದವರನ್ನು ಮಣ್ಣುಗಾಣಿಸಿ ಆಸ್ತಿ ಎತ್ತಿ ಹಾಕಲು ನಿಂತ ರುದ್ರಯ್ಯನೂ, ವಿಶ್ವೇಶ್ವರಭಟ್ಟರೂ ಸನಾತನಿಗಳು. ಭೈರವೇ ಶ್ವರ ಮೂರ್ತಿಯನ್ನು ಯಾರೋ ಒಡೆದಿದ್ದು, ಅಲ್ಲಿ ಹೊಲೆಯರನ್ನು

ಹೊಗಿಸಲು, ಸುಧಾರಕರು ಯತ್ನ ನಡಿಸಿದ್ದರು. ಹೊಲೆಯರಲ್ಲಿಯೇ ಕೆಲವರು ಶೀಘ್ರಗಾಮಿಗಳೂ, ಕೆಲವರು ಮಂದಗಾಮಿಗಳೂ ಇದ್ದರು. ಆ ಹೊಲೆಗೆಲಸವನ್ನು ತಪ್ಪಿಸಲು, ನೂರೆಂಟು ಜಾತಿಯ ಸ್ಪರ್ಶ ಹಿಂದುಗಳಲ್ಲಿ ಒಕ್ಕಟ್ಟನ್ನುಂಟುಮಾಡುವದಕ್ಕೆ ಸನಾತನಿಗಳಿಬ್ಬರ ಪ್ರಯತ್ನ. ವಕೀಲನು ತಮ್ಮ ಕಟ್ಟಳೆಯನ್ನು ವಿರುದ್ಧ ಮಾಡಿಕೊಟ್ಟರೂ ಅವನ ಈ ಹೊಲ್ಲದ ಕೆಲಸಕ್ಕೆ ತಾವು ವಿರೋಧಿಸತಕ್ಕವರೇ ಎಂದು ಅವರ ಹಟ. ಗೊತ್ತು ಮಾಡಿದ ದಿವಸ ಹೊಲೆಯರು ಸೆರೆಕುಡಿದು ಉತ್ಸಾಹದಿಂದ ಭಜನೆ ಮಾಡುತ್ತ ಗುಡಿಯನ್ನು ಪ್ರವೇಶ ಮಾಡುವುದಕ್ಕೆ ಹೊರಟರು. ಅಷ್ಟೇ ನಿಶ್ಚಯದಿಂದ ಇತ್ತ ತಡೆಯುವದಕ್ಕೂ ಅವರು ನಡುಗಟ್ಟಿದರು. ಆ ಕೋಲಾಹಲದಲ್ಲಿ ಒಂದೆರಡು ತಲೆ ಒಡೆದವು, ಒಂದೆರಡು ಹೋದವು. ಕೊನೆಗೆ ಸುಧಾರಕರ-ಸನಾತನಿಗಳ ಹಾದಿಯು ಹಾಗೆ 'ಉದ್ಧಾರ' ಗೊಂಡಿತು.

**ಗೋಲ್:—**ವಿಚಾರದ ತಾಕಲಾಟ. ತರುಣ ವಿದ್ಯಾರ್ಥಿಗಳು; ಉದಿತೋದಿತ ಬುದ್ಧಿಶಾಲಿಗಳು; ವಿಚಾರದ ಭರದಿಂದ ಮಾತಿನ ಮಳೆ ಸುರಿದು 'ಗುರಿ'ಯ ವಿಷಯದಲ್ಲಿ ಗಂಭೀರವಾದ ಗೋಪುರಗಳನ್ನು ಕಟ್ಟುವ ರೀತಿ ಇದರಲ್ಲಿದೆ. "ವಿಚಾರಕ್ಕೆ ಸ್ವಲ್ಪ ಎಡೆ ಇರಲಿ ಎಂಬ ಉದ್ದೇಶದಿಂದ ಇದನ್ನು ಜೋಡಿಸಿದೆ" ಹುಚ್ಚಾಟಗಳಲ್ಲಿ ಎಂದು ಪ್ರಕಾಶಕರು ಅರಿಕೆ ಮಾಡಿಕೊಂಡಿದ್ದಾರೆ.

ಸಂಕ್ಷೇಪವಾಗಿ ವಿವರಿಸಿದ ಹುಚ್ಚಾಟಗಳನ್ನು ಓದಿದಾಗಲೇ ಅದರೊಳಗಿನ ಸಂದರ್ಭ, ಪಾತ್ರವೈಚಿತ್ರ್ಯ, ಮಾತಿನ ಮುರವು, ಹಾಸ್ಯದ ಬೆಡಗು, ಅಪಹಾಸ್ಯದ ಕೇಡು ಇವೆಲ್ಲ ಹೊಳೆಯುವವು. ಬೀರಬಲ್ಲನ ಚಾತುರ್ಯ, ತೆನ್ನಾಲಿಯ ಕುಚೇಷ್ಟೆ, ಭಾಸನಹಾಸ, ವಿದೂಷಕನ ಪರಿಹಾಸಗಳ ಉದಾಹರಣೆಗಳೆಷ್ಟೋ ಹುಚ್ಚಾಟಗಳಲ್ಲಿ ದೊರಕೊಳ್ಳುವವು. ನಗೆಯ ಬುಗ್ಗೆಗಳು, ಕನ್ನಡಿಗರಿಗೆ ಸುಲಭ ಸಾಧ್ಯವಾಗಿರುವಾಗ ಅವುಗಳನ್ನು ಓದಿ, ನಲಿದು, ನಕ್ಕು ಹಿಗ್ಗಿನಲ್ಲಿ ಕೆಲಹೊತ್ತನ್ನಾದರೂ ಕಳೆಯಲಿಕ್ಕೆ ಎಷ್ಟು ಜನ ಕನ್ನಡಿಗರು ತಮ್ಮ ಕಾಲ, ಧನಗಳನ್ನು ವ್ಯಯಗೊಳಿಸಿದ್ದಾರೆ? ಹಾಗೆ ಮಾಡಿರದಿದ್ದರೆ, ಅದೂ ಒಂದು ತರದ ಹುಚ್ಚಾಟವೆಂದೇ ಅನ್ನಬೇಕಾಗುತ್ತದೆ.

# ೮ ಸಾಹಿತ್ಯಜೀವನಮಂತ್ರ

## ಹೇಳಿಯಾಗಿದೆ

ಬೇಂದ್ರೆ ಅವರ ಸಾಹಿತ್ಯವಿಚಾರಗಳನ್ನೂ, ಭಾಷೆಯ ಬಗೆಗೆ ಅವರ ಕಲ್ಪನೆಗಳನ್ನೂ, ಸೃಷ್ಟಿ, ದೇಶ, ಜೀವನ, ದಾಂಪತ್ಯ ಮೊದಲಾದವುಗಳನ್ನು ಕುರಿತ ಅವರ ವಿಚಾರಗಳನ್ನೂ ಈಗಾಗಲೇ ಸಂದರ್ಭಾನುಸಾರವಾಗಿ ಅಲ್ಲಲ್ಲಿ ಹೇಳಿಯಾಗಿದೆ. ಇಲ್ಲಿ ಹೇಳುವ ಮಾತುಗಳೆಂದರೆ ಇನ್ನುಳಿದವುಗಳೇ ಸರಿ. ಸಾಹಿತ್ಯದ ಬಗೆಗೂ, ಜೀವನದ ಬಗೆಗೂ ಅವರು ಮಾಡಿದ ಪ್ರಕಟಿಸಿದ ವಿಚಾರಗಳು. ಅವುಗಳಲ್ಲಿ ಮುಖ್ಯವಾದವುಗಳನ್ನು ಸಂಕ್ಷೇಪವಾಗಿ ಕೊಡಲಾಗಿದೆ.

## ಕಾವ್ಯಯೋಗ

ಕವಿವರ್ಯರಾದ ಅಂಬಿಕಾತನಯದತ್ತರು, ಸ್ವಭಾವದಲ್ಲಿ ವೇದಾಂತಿಗಳೆಂದು ತಾವೇ ಹೇಳಿಕೊಂಡಿದ್ದಾರೆ. ಕವಿತನಕ್ಕೂ ವೇದಾಂತಕ್ಕೂ ತಳಕು ಬಿದ್ದು ಅಲ್ಲೊಂದು 'ಕಾವ್ಯಯೋಗ'ವು ಕಂಗೊಳಿಸಿದೆ. "ಎಲ್ಲ ಯೋಗಗಳಂತೆ ಈ ಯೋಗದ ಗುರಿಯಾದರೂ ಬ್ರಹ್ಮಜ್ಞಾನ, ಮುಕ್ತಿ. ಆನಂದಲಾಭ ಇವೇ ಆಗಿವೆ." ಬೇಂದ್ರೆ ಅವರು ಹೇಳುವಂತೆ ಕಾವ್ಯಯೋಗವೆಂದರೆ–ಭ್ರಮೆಯ ಬಂಧನದೊಳಗಿಂದ ಬಿಡಿಸಿ ನಮ್ಮನ್ನು ಹಿಗ್ಗಿಸುವುದು. ಕಾವ್ಯಯೋಗದ ಪ್ರಥಮಾವಸ್ಥೆಯಲ್ಲಿ ವ್ಯಕ್ತಿಯು ರಸಿಕನಾಗಿರುತ್ತಾನೆ. ಎಂಥ ಸಾಮಾನ್ಯ ಮನುಷ್ಯನಾದರೂ ಅವನನ್ನು ಹಿಗ್ಗುಗೊಳಿಸುವ ವಸ್ತುವಾಗಲಿ, ಪ್ರಸಂಗವಾಗಲಿ ಇದ್ದೇ ಇರುತ್ತದೆ. ಆ ಹಿಗ್ಗಿನ ಪ್ರಸಂಗದಲ್ಲಿ ಅವನು ಮೂಕಕವಿಯೇ ಆಗಿರುತ್ತಾನೆ. ಅದು ಅವನಿಗೆ ರಾಗದ್ವೇಷಾತ್ಮಕದೃಷ್ಟಿಯಿಂದ ಲಭಿಸಿದ ಸೌಂದರ್ಯಾನಂದವಾದುದರಿಂದ ಅದು ವಿಷಯಾನಂದವೆನಿಸುತ್ತದೆ. ಬರಬರುತ್ತ ಸಂಸ್ಕಾರಗೊಂಡ ಅವನ ಸೌಂದರ್ಯದೃಷ್ಟಿಯು ಬದಲಿಸುತ್ತ ಹೋದಂತೆ ಅವನು ಸಾಹಿತ್ಯಕವಿ, ಭಕ್ತ, ಋಷಿ, ಲೀಲಾವತಾರಿಗಳೆಂಬ ಮೆಟ್ಟಲುಗಳನ್ನು ಏರಿಸಿಲ್ಲುವನು;

ಅವನು ಏರಿದ ಮೆಟ್ಟಲಿಗನುಸರಿಸಿ ರಸಿಕನ ವಿಷಯಾನಂದವು ವಿದ್ಯಾನಂದ, ಅದ್ವೈತಾನಂದ, ಆತ್ಮಾನಂದ, ಯೋಗಾನಂದವಾಗಿ ಮಾರ್ಪಡುತ್ತ ಬರುವದು. ಹೀಗೆ ಮಾರ್ಪಡಿಸುವ ಬಲವುಳ್ಳ ಕಾವ್ಯವೇ ನಮಗೀಗ ಬೇಕಾದುದು. ಶ್ರೀ ಅರವಿಂದರು ಹೇಳುವಂತೆ—"ಜೀವಿತದ ಹುರುಳುತಿರುಳನ್ನು ಒಡನುಡಿದು ತೋರಿಸಿ ಸಂಸಾರಸಾರೋದಯವಾಗುವ ಕಾವ್ಯವು ನಮಗೆ ಬೇಕಾಗಿದ್ದರೂ ನರನೊಳಗಿನ ನಾರಾಯಣನ ಅವತಾರದ ಬೆಲೆಗಳನ್ನೂ, ಮಾನವನೊಳಗಿನ ಮನುವಿನ ಉದ್ಧಾರದ ನೆಲೆಗಳನ್ನೂ ಪ್ರಾತಿಭಚಕ್ಷುವಿನ ಜ್ಯೋತಿರ್ಮಯ ಬೆಳಕಿನಲ್ಲಿ ಜಗತ್ತಿನ ರಸಿಕದೃಷ್ಟಿಗೆ ತೋರಿಸುವ, ಶ್ರವಣಮಾತ್ರದಿಂದ ಸಹೃದಯರ ಹೃದಯದಲ್ಲಿ ವಿದ್ಯುದ್ದೀಪಗಳ ಕಾರ್ತಿಕವನ್ನು ಹಚ್ಚಿದಂತೆ ಮಾಡುವ ಮಂತ್ರಬಲವನ್ನು ಕಿವಿಯಿಂದೀಂಟಿಸುವ ಕಾವ್ಯ ನಮಗೆ ಬೇಕಾದ ಕಾವ್ಯ" ಇನ್ನು ಇಂಥ ಕಾವ್ಯಗಳನ್ನು ಸವಿಯಲಿಕ್ಕೆ ರಸಿಕರೂ ಸಹೃದಯರೂ ಬೇಕು. ಅವರು ಎಂಥವರು? "ಸಂಸಾರವು ಲೀಲಾಮಯವೆಂದು ಭಾವಿಸಿ ಭೋಗಹೊಂದುವ ಯೋಗಿಯೇ ರಸಿಕಶಿಖಾಮಣಿ; ಈ ಯೋಗದ ಆಂತಿಕರೇ ಸಹೃದಯರು." ಅಂಥ ಮಹಾಕಾವ್ಯವನ್ನು ಸವಿದು, ರಸಿಕನ ಹೃದಯ ಹಿರಿದಾಗುವದು; ಮಾರ್ಪಾಡಾಗುವದು. ಅದು ನವ ಜನ್ಮ. ಆ ನವಜನ್ಮದಲ್ಲಿ ಬುದ್ಧಿ, ಅಂತಃಕರಣ, ಪೌರುಷ ಸಮರಸವಾದ ಸೃಷ್ಟಿಯಿರುವದು. ಅಂಥ ಜನರ ಒಳಗವು ನವಜನಾಂಗ. "ಕವಿಹೃದಯದ ಸ್ಥಾಯಿಯು ಪ್ರೀತಿ, ಪ್ರೇಮ. ಕವಿಹೃದಯದ ಪ್ರೇಮಕ್ಕೂ ಸೃಷ್ಟಿಯ ಸೌಂದರ್ಯಕ್ಕೂ ಸ್ಪರ್ಶವಾದಲ್ಲಿ ರಸವೊಸರುವದು. ರಸಿಕನು ಅದನ್ನು ಸೃಷ್ಟಿಯಲ್ಲಿ ಕಾಣುವನು; ಸಾಹಿತ್ಯಕವಿಯು ಅದನ್ನು ಎಲ್ಲರಿಗೂ ತೋರಿಸುವನು; ಭಕ್ತಕವಿಯು ಅದನ್ನು ತನ್ನಲ್ಲಿಯೇ ಮೂಡಿಸುವನು; ಋಷಿಯು ಅದನ್ನು ಎಲ್ಲರಲ್ಲಿ ಮೊಳೆಯಿಸುವನು; ಮಹಾಕವಿಯು ನೂತನ ಜಾತಿಯ ಬೀಜ ಬಿತ್ತುವನು. ಅದರಿಂದ ಹೊಸ ಜನಾಂಗ ಹುಟ್ಟುವದು. ಕನ್ನಡಿಗರ ಜಾತಿಯು ಹೀಗೆ ಕನ್ನಡ ಅನುಭಾವಿಗಳ ಫಲ." ಆದ್ದರಿಂದಲೇ ಇಂದು, ವೈಯಾಕರಣಿಗಳೂ, ನೈಯ್ಯಾಯಿಕರೂ ಕಾವ್ಯವಿಚಾರವನ್ನು ಚರ್ಚಿಸುವ ಯುಗವು ತೀರಿ, ತತ್ವಜ್ಞರೂ ತತ್ವಜಿಜ್ಞಾಸುಗಳೂ ಕಾವ್ಯವಿಮರ್ಶೆ ಮಾಡುವ ಯುಗವು ಬಂದಿದೆಯೆಂದು ಹೇಳಬೇಕು.

## ಕನ್ನಡಕುಲ

ಯಾರು ಎಲ್ಲಿ ಹುಟ್ಟಿರುವರೋ ಬೆಳೆದಿರುವರೋ ಅಲ್ಲಿಯ ಗಾಳಿ ಅನ್ನ ನೀರು ಅವರ ದೇಹಕ್ಕೆ ಹಿತವೆಂದು ಸಾಮಾನ್ಯವಾಗಿ ಹೇಳುವಂತೆ. ಇತಿಹಾಸ ಸಾಹಿತ್ಯಶಾಸ್ತ್ರ ಇವು ನುಡಿಗೆ ಗಾಳಿ ಅನ್ನನೀರುಗಳಿದ್ದಂತೆ. ಕನ್ನಡಕುಲವು ಈ ನೆಲೆಯನ್ನು ಬಿಡುವದರಿಂದಲೇ, ಕನ್ನಡಿಗರು, ಹಿರಿಯರ ಸೊತ್ತಿಲ್ಲದ ಅಗತಿಕರಂತೆ ಅಲೆದಾಡುವುದು. "ನಮ್ಮ ಸಾಹಿತ್ಯ, ಇತಿಹಾಸ, ಸಂಸ್ಕೃತಿಯನ್ನು ನಾವು ದುರ್ಲಕ್ಷ್ಯ ಮಾಡಿದಷ್ಟು ಮುಂಬರಿವ ಯಾವ ಜನಾಂಗವೂ ರಾಷ್ಟ್ರವೂ ಮಾಡಿರಲಾರದು" ಎಂದು ಬೇಂದ್ರೆ ಅವರು ಅಭಿಪ್ರಾಯಪಡುತ್ತಾರೆ. ಈ ಹೀನಾವಸ್ಥೆಯು ಹೋಗಬೇಕಾದರೆ, ಮಾಡತಕ್ಕ ಕೆಲವು ಉಪಾಯಗಳನ್ನು ಅವರು ಹೇಳುತ್ತಾರೆ. ಏನಂದರೆ—"ಊರೂರಿಗೆ ದಾಸಕೂಟಗಳಾಗಬೇಕು, ಆದರೆ ಬರಿ ವೈಷ್ಣವರವಲ್ಲ. ಅನುಭವಮಂಟಪಗಳು ಉದಯಿಸಬೇಕು; ಆದರೆ ಕೇವಲ ವೀರಶೈವರವಲ್ಲ. ಸಾಹಿತ್ಯಗೋಷ್ಠಿಗಳು ನೆರೆಯಬೇಕು, ಆದರೆ ಸಂಶೋಧಕರಿಗಲ್ಲ. ಶೂನ್ಯಸಂಪಾದನೆ, ಹರಿಕಥಾಮೃತಸಾರ, ಅನುಭವಾಮೃತ ಭರತೇಶವೈಭವ ಮೊದಲಾದವುಗಳ ಶ್ರವಣ ಮನನ ನಿಧಿಧ್ಯಾಸವು ದೊಡ್ಡ ಪಟ್ಟಣಗಳಲ್ಲಿ ದಿನಾಲು ನಡೆಯಬೇಕು." ಇತ್ಯಾದಿ. ಅಲ್ಲದೆ, ನಮ್ಮ ಜನದ ದುಡಿತ, ದುಡ್ಡು, ದೊಡ್ಡಸ್ತಿಕೆ ಇವು ಮೂರೂ ಸಾಹಿತ್ಯ. ವಾಙ್ಮಯ, ಕಲೆ, ಕೌಶಲ್ಯ, ವಿದ್ಯೆಗಳಿಗೆ ಬೆಂಬಲ ಮುಂಬಲವಾಗಬೇಕೆಂದೂ ಇನ್ನೊಮ್ಮೆ ಸಲಹೆಯಿತ್ತಿದ್ದಾರೆ. ಇತಿಹಾಸವು ನಮಗೆ ಶೃಂಗಾರ ವೀರ ಕರುಣಾದ್ಭುತಾದಿ ನವರಸಗಳ ನವೋನವ ಅವತಾರ ಲೀಲಾಮೂರ್ತಿಯಂತೆ ಕಂಗೊಳಿಸುವದಿಲ್ಲ. ಶರೀರರಚನಾಶಾಸ್ತ್ರವನ್ನು ತಿಳಿಸಲು ತಂದ ಎಲುಬಿನ ಪೆಟ್ಟಿಗೆಯಂತೆ ನಮ್ಮ ಇತಿಹಾಸವಾಗಿದೆಯೆಂದು ಮರುಕಪಟ್ಟು, ಕನ್ನಡಕುಲಪುರುಷನು ಕನಸಿನೊಳಗಿನ ಮಾನಿಸನಲ್ಲ, ನೀರೊಳಗಿನನೆರಳಲ್ಲ, ಚಿತ್ರದೊಳಗಿನ ಗೊಂಬೆಯಲ್ಲ, ಕಲ್ಪನೆ ಬರೆದ ಚಿತ್ರವಲ್ಲ; ಪ್ರಸಂಗಗಳೆಂಬ ಎಲುಬಿನ ಹಂದರವಲ್ಲ. ಅವನು ನಮ್ಮೆಲ್ಲರ ವಿದ್ಯೆಯೊಳಗಿನ ದೀಪವಾಗಿರುವ ಬೆಳಕೆಂದು ಸಾರಿದ್ದಾರೆ. ಭಕ್ತರಲ್ಲಿ ಕುಲವನರಿಸಿವರೆ ತಲೆದಂಡವೆಂದು ಶಿವಶರಣರು ಹೇಳಿದಂತೆ, ಕನ್ನಡ

ಭಕ್ತರಲ್ಲಿ ಬಿಳಿಯಕರಿಯ, ಆರ್ಯದ್ರಾವಿಡ, ಮಾತೃಭಾಷೆಯಿಂಥವ ಅಂಥವ, ಶೈವ ವೈಷ್ಣವ, ಹಿಂದು ಮ್ಲೇಂಛ, ಹಿಂದುಳಿದವ ಮುಂದಾದವ ಎಂದು ಮುಂತಾಗಿ ಭೇದವೆಣಿಸುವುದು ಅಪರಾಧವಾದೀತೆಂದೂ ತಿಳಿಪಡಿಸಿದ್ದಾರೆ. "ಪ್ರಾಚೀನ ಸಂಸ್ಕೃತಿಯನ್ನು ಸಂಗ್ರಹಿಸಲು ಸಂಸ್ಕೃತವು ತನ್ನ ಮಟ್ಟಿಗೆ ತಾನಿರಲಿ; ಕರ್ನಾಟಕದ ಹೊರಗಿನ ಬಳಕೆಗೆ ಹಿಂದುಸ್ತಾನದವರೊಡನೆಂದು ಹಿಂದುಸ್ತಾನಿ ಇರಲಿ; ಹಿಂದುಸ್ತಾನದ ಹೊರಗಿನ ಜಗತ್ತಿನ ಕೂಡ ವ್ಯವಹಾರಕ್ಕೆ ಇಂಗ್ಲಿಷ ಇದ್ದುಕೊಳ್ಳಲಿಯೆಂದು ಕನ್ನಡವನ್ನು ಆಕ್ರಮಿಸಲು ಬರುವ ಭಾಷೆಗಳಿಗೊಂದು ಸೀಮೆ ತೋರಿಸಿದ್ದಾರೆ.

## ಧರ್ಮಜೀವನ

ಒಳ್ಳೆಯ ಮನಸ್ಸಿನಿಂದ ಹೊಂದಿಕೊಳ್ಳುವುದೇ ಧರ್ಮವೆಂದೂ ಒಳ್ಳೆಯ ಮನಸ್ಸಿನಿಂದ ಹೊಂದಗುಡದಿರುವುದೇ ಅಧರ್ಮವೆಂದೂ ಅವರ ಮಂತ್ರ. ಅದರಂತೆ ಒಂದನ್ನೊಂದು ತಿಂದುಬದುಕುವುದು ಬದುಕಲ್ಲ, ಸಾವು. ಒಂದನ್ನೊಂದು ತಿಳಿದು ಬದುಕುವುದು ಬಾಳು. "ಪ್ರಾಣಿಗಳಂತೆ ಬದುಕಬೇಡಿರಿ; ಜೀವಿಗಳಂತೆ ಬಾಳಿರಿ. ಪ್ರಾಣಹಿಂಡಿ ಜೀವ ತಿನ್ನಬೇಡಿ; ಜೀವಕ್ಕೆ ಜೀವಕೊಟ್ಟು ಜೀವಿಸಿರಿ" ಎನ್ನುವ ಸಾಹಿತ್ಯದುಂದುಭಿಯನ್ನೇ ಅವರು ಉಗ್ಗಡಿಸುತ್ತಾರೆ. "ನಮ್ಮ ಪ್ರಾಣಕ್ಕೆ ಸಹನೆಯಿಲ್ಲ; ನಮ್ಮ ಬುದ್ಧಿಗೆ ವಿವೇಕ ಕಡಿಮೆ; ನಮ್ಮ ಹೃದಯಕ್ಕೆ ರಸಿಕತೆ ಇನ್ನೂ ಬೇಕು. ನಮ್ಮ ದುಃಖವೂ ಕಃಪದಾರ್ಥವೆನಿಸಿ ರುಚಿಯ ದ್ರವ್ಯವಾಗಬೇಕು. ಪ್ರಾಣಿಮಾತ್ರದ ಸುಖವೂ ಆನಂದದ ಲಹರಿಯೇ ಆಗಿ ಲಾಸ್ಯವಾಡಬೇಕು. ವಿಚಾರದ ತೊಡಕಿನಲ್ಲಿಯೂ ವಿವೇಕದ ಎಳೆ ತಪ್ಪಿ ಹೋಗಬಾರದು. ಈ ಮೂರರ ಸಮತೂಕವೇ ಜೀವದ ಮೆಚ್ಚು; ಆತ್ಮದ ಅಚ್ಚು" ಎಂದು ಬಗೆದು ಧರ್ಮಜೀವನದ ಮರ್ಮವನ್ನು ಅರುಹಿದ್ದಾರೆ. ಕನ್ನಡಿಗರೆಲ್ಲರಿಗೆ ಜಾತಿಕುಲ ಮೈಮಟ್ಟಿಗೆ; ಮತಗಿತ ಮನದ ಮಟ್ಟಿಗೆ; ಕನ್ನಡ ಧರ್ಮ ಮಾತ್ರ ನಮ್ಮ ನೇತ್ರಸೂತ್ರವಾಗಿ ಉಳಿಯಬೇಕೆಂದು ಹೇಳಿಕೊಂಡಿದ್ದಾರೆ. ಆದರೆ ಮಾನವನು ಮನದ ಮೂರ್ತಿಯಾಗಿ ಮೆರೆಯಬೇಕಾದರೆ ಅವನ ಅನ್ನದ ರೂಪವು ಎಷ್ಟೋ ನಿರ್ಮಲವಾಗಬೇಕು. ಅನ್ನನಿಧಿಯಾದ ಭೂಮಿ

ಯನ್ನು ಪಾದಾಕ್ರಾಂತ ಮಾಡುವ ಕೆಲ ಮಾನವರ ವಿಧಾನದಿಂದಲೇ ಉಳಿದ ಮಾನವರು ಅರಣ್ಯಕರಾಗಿ ಪಶುಕೋಟಿಯನ್ನು ಸೇರಬೇಕಾಗುವದು. ಮಾನವನ ಅನ್ನದಿಂದ ಆವನ ಮನವನ್ನು ಅಳೆಯಬೇಕಾಗಿದೆ. ಮನುಷ್ಯನ ಮೈಯು ಅನ್ನದ ಪರಿಣಾಮ. ಅದೇಕೆ ಮೈಕೂಡ ಅನ್ನವಲ್ಲವೇ?

## ಅನ್ನದ ತೊಡಕು

ಅನ್ನದ ತೊಡಕಿಗೆ ಧನದ ವೈಷಮ್ಯವೇ ಕಾರಣವೆಂದು ಹೇಳುವರು. ಬೇರೆ ಮನೆಗಳು ಹಾಳು ಆದಾದಂತೆ, ಒಂದು ಮನೆಯ ಅಂತಸ್ತು ಏರುವದು. ಹೀಗೆ ಉಳ್ಳವರಾಗುವದಕ್ಕಿಂತ ಇಲ್ಲದಿರುವುದು ಲೇಸು ಎಂಬುದು ತಾರತಮ್ಯದ ಮಾತಂತೆ. ಒಂದು ಸಮಾಜದಲ್ಲಿ ಬಡವರಿರುವದು ಆ ಸಮಾಜಕ್ಕೆ ಕೊರತೆಯೆಂಬ ಮಾತನ್ನು ಎಲ್ಲರೂ ಒಪ್ಪುವರು. ಮೊಟ್ಟಮೊದಲು ಬಡತನವು ಸಾಮಾಜಿಕ ಪಾಪವೆಂದು ತಿಳಿಯುವ ಹೊರತು ಮನುಷ್ಯನಿಗೆ ಮುಂದೆ ಗತಿಯಿಲ್ಲ. "ಸಮಾಜ ಪುರುಷನ ನೆರಳಿಂದರೆ ಸಂಸ್ಥಾನ. ಧನದ ವೈಷಮ್ಯವನ್ನು ಹೋಗಲಾಡಿಸುವುದು ಎಂದೂ ಆಗದ ಮಾತು. ಆದರೂ, ಅನ್ನ ಸಂಗ್ರಹವನ್ನು ಮಾಡಿ ಪ್ರಾಣಹಾನಿಯನ್ನು ಯಾರಾದರೂ ಮಾಡಿದರೆ, ಸಂಸ್ಥಾನವು ಅದನ್ನು ಸರಿಪಡಿಸಲಿಕ್ಕೇಬೇಕು. ಸಂಸ್ಥಾನದ ಅಥವಾ ಸಮಾಜದ ಧನವು ಎಲ್ಲ ಪ್ರಾಣಿಗಳಿಗೂ ಸಮಾನ ಅನುಕೂಲತೆಗಳನ್ನುಂಟುಮಾಡುವದಕ್ಕಾಗಿ. ಹೀಗಾಗದಿದ್ದರೆ ವ್ಯರ್ಥವಾಗಿ ಜನಧನದ ಹಗೆಯುಂಟಾಗುವದು. ಆದ್ದರಿಂದ ಧನವು ಜನರನ್ನು ದುರ್ಲಕ್ಷಿಸದಂತೆಯೂ, ಜನವು ಧನವನ್ನು ತಿರಸ್ಕರಿಸದಂತೆಯೂ ಮನವನ್ನು ಸಂಸ್ಕಾರಗೊಳಿಸುವುದೇ ಸಮಾಜದ್ದೊಂದು ಕಾರ್ಯ; ಸಂಸ್ಥಾನದ ಕಾರ್ಯ"ವೆಂದು ಹೇಳಿ. ದಂಡು, ಭಂಡಾರ, ಪ್ರಧಾನರು, ರಾಜರು ಇದಕ್ಕಾಗಿಯೇ ಇರಬೇಕೆಂದೂ, ಧನ ಧನದೊಳಗಿನ ಹಗೆಗಳನ್ನೂ, ಜನ ಜನದೊಳಗಿನ ಬಗೆಗಳನ್ನೂ ತೆಗೆದುಹಾಕಿ, ಸಮಾಜ ಪುರುಷನು ಸಾಯದಂತೆ ಮಾಡುವುದೇ ಸಂಸ್ಥಾನದ ಕೆಲಸವೆಂದೂ ಹೇಳುತ್ತಾರೆ. ಈ ಪ್ರಪಂಚವು ಪರಬ್ರಹ್ಮನ ಪ್ರೀತಿಬೀಜದ

ವಿಸ್ತಾರವಾಗಿದ್ದರಿಂದ ಸಂಸ್ಥಾನದಲ್ಲಿ ಪರಸ್ಪರ ಪ್ರಗತಿಯಾಗುವಂತೆ ನಯಶಾಸ್ತ್ರದ ನೀತಿ ಇರಬೇಕು. ಇರಲಿ. ಅನ್ನದ ತೊಡಕು ಎಲ್ಲಿಗೆ ಬಂತು? ಅನ್ನ ಹಶಿವುಗಳ ತೊಡಕನ್ನು ತೊಡಕಿಲ್ಲದೆ ಬಿಡಿಸುವ ಪ್ರಯೋಗವೆಂದರೆ ಧರ್ಮವೆಂದೂ, ಆ ಧರ್ಮಶಕ್ತಿಯು ಹಸಿವು ಅನ್ನಗಳ ತೊಡಕಿಗೆ ಸಿಗದಂತೆ ಮೀರಿನಿಂತ ಜ್ಞಾನದಲ್ಲಿದೆಯೆಂದೂ ಹೇಳಲಾಗುತ್ತದೆ.

## ಜ್ಞಾನದ ನೆಲೆ

ನಿದ್ದೆಯ ಆಚೆಗೊಂದು ಎಚ್ಚರದ ಹಿಮಾಲಯವಿದೆಯೆಂದೂ ಆ ಎತ್ತರದ ಮೇಲಿನ ಎಚ್ಚರಕ್ಕೆ ಸಮಾಧಿಯೆಂದೂ, ಸಮಾಧಿಯು ಎಚ್ಚರವು ಇಂದ್ರಿಯ ಸದೃಶ ಅನುಭವವುಳ್ಳದ್ದಾಗಿದೆಯೆಂದೂ ಹೇಳುತ್ತಾರೆ. ಆ ಕೇಂದ್ರವೇ ಸ್ವತಂತ್ರ ವಿಚಾರ ಸಾಮ್ರಾಜ್ಯದ ಸಿಂಹಾಸನವು. ಪ್ರಖರ ಏಕಾಗ್ರತೆಯಿಂದ ಅಲ್ಲಿಗೇರಲಿಕ್ಕಾಗುತ್ತದೆ. ಅಲ್ಲಿಗೇರಿದವನು ಸ್ಪರ್ಶ ಮಾತ್ರದಿಂದ ಅಷ್ಟೇ ತೇಜವನ್ನು ಕೊಡುವ ತೇಜಸ್ವಿ ದೀವಿಗೆಯಂತೆ. ತನ್ಮಯನಾದ ಶ್ರೋತೃವಿನಲ್ಲಿ ಸ್ವತಂತ್ರ ವಿಚಾರವಂತನು ತನ್ನಂಥ ಜ್ಯೋತಿಯನ್ನೇ ಪ್ರಕಟಿಸುವನು. ಇಂಥ ವಿಚಾರವಂತರಾಗುವುದೇ ನಮ್ಮ ಧ್ಯೇಯ. ಆ ಧ್ಯೇಯವನ್ನು ಸಾಧಿಸಬೇಕಾದರೆ ಶ್ರೀರಾಮಕೃಷ್ಣರಂತೆ ಎಲ್ಲಕ್ಕೂ ಮೊದಲು “ಕಾಲಿ ಮಾತೆಯನ್ನೇ ತಮ್ಮ ಅಹಂಕಾರದ ಜಗಲಿಯಲ್ಲಿ ಪ್ರತಿಷ್ಠೆ” ಗೊಳಿಸತಕ್ಕದ್ದು. ಹಾಗೂ ಸರ್ವ ಚಿಂತೆಗಳ ನಾಶಕನಾದ ವಿಜ್ಞಾನ ಸೂರ್ಯನು ಬೇಗನೆ ಉದಯವಾಗಲೆಂದು ಹಾರಯಿಸಿ ಪ್ರಾರ್ಥಿಸತಕ್ಕದ್ದು.

## ಹಳೆ—ಹೊಸ

ಬೇಂದ್ರೆ ಅವರು ಸಂಪ್ರದಾಯವೆಂದರೆ ದೇಹಶುದ್ಧಿ, ಆನುವಂಶಿಕ ಗುಣಸಂಪತ್ತಿ, ದೈವದ ಆನುಕೂಲ್ಯವೆಂದೂ ಹೊಸ ರೀತಿಯೆಂದರೆ ಗುಣವೃದ್ಧಿ, ಪೌರುಷದ ಪ್ರಾಚುರ್ಯ, ಸಾಹಸದ ಸಮೃದ್ಧಿಯೆಂದೂ ಭಾವಿಸುತ್ತಾರೆ. ಸಂಪ್ರದಾಯವನ್ನೇ ಒತ್ತಿ ಹೇಳಲು ವೇದ ಜಡಶ್ರುತಿಯು ಶ್ರುತಿ ಹಿಡಿಯಬಹುದೆಂದೂ, ಹೊಸ ಹೊಸ ರೀತಿಯನ್ನೆತ್ತಿ ಹಿಡಿಯಲು ರಾಜಸ

ಸ್ಮೃತಿಯು ವಿವಿಧ ಸ್ವರಗಳನ್ನು ತೆಗೆಯಬಹುದೆಂದೂ ಹೇಳುತ್ತಾರೆ. ಪ್ರಾಚೀನ ಕಾವ್ಯಗಳಲ್ಲಿ ಅವರಿಗಿರುವ ಆದರವು ಅಗಾಧವಾದದ್ದು; ಹಾಗೂ ಆಧುನಿಕ ರೀತಿಗಳಲ್ಲಿಯ ಸಹಾನುಭೂತಿಯು ಸ್ಪೃಹಣೀಯವಾದದ್ದು. "ಇಂದಿನ ಸಾಹಿತಿಗಳಿಗೆ ಹಿಂದಿನ ಸಾಹಿತ್ಯದ ಬಗ್ಗೆ ಪ್ರೀತಿಯು ಪಂಡಿತರಿಗಿಂತಲೂ ಒಂದು ತೂಕ ಹೆಚ್ಚೇ ಇದೆಯೆಂದು ನಾನು ಹೇಳಬಲ್ಲೆ. ಪಂಡಿತರಿಗೆ ಹಳೆಯ ಕಾವ್ಯಗಳು ಮೂರ್ತಿಗಳಂತೆ ಪೂಜ್ಯವಾಗಿರಬಹುದು; ಹಕ್ಕಿನ ಹೊಲಗಳಂತೆ ಅತಿ ಪರಿಚಯವಾಗಿರಬಹುದು. ನಮಗೋ ಅವು ಉದ್ಯಾನಗಳಂತೆ ವಿಹಾರ ಯೋಗ್ಯಗಳಾಗಿಯೂ, ಅರಣ್ಯಗಳಂತೆ ಸಾಹಸದ ಸ್ಥಾನಗಳಾಗಿಯೂ, ಗವಿಗಳಂತೆ ಧ್ಯಾನಾನುಕೂಲಗಳಾಗಿಯೂ, ಗುಡ್ಡಗಳಂತೆ ವಿಶ್ರಾಮ ದೇಶಗಳೂ ಆಗಿವೆ." ಇನ್ನೊಂದು ಕಡೆಗೆ—"ಜಕಣಾಚಾರ್ಯರ ಗುಡಿಗಳಂತೆ ಭವ್ಯವಾದವುಗಳು ನಮ್ಮ ಮಹಾಕಾವ್ಯಗಳು. ಅವರ ಕೃತಿ-ನಾಯಕರು ಗೊಮ್ಮಟೇಶ್ವರನಂತೆ ಗಂಭೀರಸೌಂದರ್ಯಶಾಲಿಗಳು. ಆಧುನಿಕ ಕವಿತೆಯು ಹಸುಮಕ್ಕಳಂತಾಡುವದು. ಹೊಸವೆಂಡರಂತೆ ನಗುವದು. ಉದಾರ ಸತ್ವದ ವಿಶಾಲ ಸಹಾನುಭೂತಿಯಿಂದೊಮ್ಮೊಮ್ಮೆ ಹಿಗ್ಗುವದು, ತಗ್ಗುವದು" ಅನ್ನುತ್ತಾರೆ. ರಾಜಕೀಯ ತಂತ್ರಗಳ ಪ್ರಯೋಗ ಶಾಲೆಯೂ, ಮತಗಳ ರಸಾಯನ ಶಾಲೆಯೂ, ಸಾಹಿತ್ಯದ ಕ್ರಿಡಾಂಗಣವೂ ಆಗಿರುವ ಕನ್ನಡವು ನವಚೈತನ್ಯದಿಂದ ತುಂಬಿ ತುಳಕದಿರುವದೇ ಆಶ್ಚರ್ಯಕರವೆಂದು ವಿಸ್ಮಿತರಾದರೂ ಕನ್ನಡದ ಇತಿಹಾಸದ ಸತ್ವಸಾರವೆಲ್ಲ ಅವರ ಜೀವಾಳದಲ್ಲಿ ಜಾಗ್ರತವಾಗಿ ಬರಬಹುದಾದರೆ, ಸಂಪ್ರದಾಯ—ಹೊಸ ರೀತಿಗಳ ಹುದಿಲಲ್ಲಿ ಅವರು ಸಿಕ್ಕು ಬೀಳದೆ ವಿಶ್ವವ್ಯಾಪಿಯಾದ ಜೀವನದ ಲಾಸ್ಯತಾಂಡವಗಳಿಗೆ ಅವರು ಹೆಜ್ಜೆಯಿಕ್ಕಬೇಕೆಂಬ ದಿವ್ಯ ಸಲಹೆಯನ್ನಿತ್ತಿದ್ದಾರೆ.

## ಬೇಂದ್ರೆ ಅವರ ಬಹುಮುಖತೆ

ಶ್ರೀ. ಬೇಂದ್ರೆ ಅವರು ಕವಿಗಳು; ಕವಿಗಳನ್ನು ನಿರ್ಮಿಸುವವರು. ನಾಟಕಕಾರರು; ಹರಟೆಗಾರರು; ಕತೆಗಾರರು. ಉತ್ತಮ ವಿಮರ್ಶಕರು; ವೇದಾಂತಿಗಳು, ಶಿಕ್ಷಕರು. ಕನ್ನಡ ಕಟ್ಟುವ ಸಮಸ್ತ ಕರ್ಮಗಳಲ್ಲಿ

ಕುಶಲರು; ಕನ್ನಡ ಕುಲಕಂಡವರು; ಪೌರುಷದ ದಾರಿಗರು. ಸಂಪಾದಕ ರಾಗಿದ್ದರು; ಪ್ರಾಧ್ಯಾಪಕರಾಗಿದ್ದಾರೆ. ಕನ್ನಡನಾಡು ಅವರಿಗೆ ತನ್ನ ಕೃತಜ್ಞತೆಯನ್ನು ತೋರಿದೆ; ತೋರಿಸುತ್ತಲಿದೆ. ಅವರು ಅನೇಕರಿಗೆ ಆಪ್ತ ಮಿತ್ರರಾಗಿದ್ದಾರೆ; ಅನೇಕರಿಗೆ ಬೆನ್ನಿಗೆ ಇದ್ದ ಅಣ್ಣಂದಿರಾಗಿದ್ದಾರೆ; ಇನ್ನು ಅನೇಕರಿಗೆ ಗುರುಗಳಾಗಿದ್ದಾರೆ. ಅವರು ಸ್ವತಂತ್ರವಾದ ಅನೇಕ ಸಾಹಿತ್ಯ ಕೃತಿಗಳನ್ನು ನಿರ್ಮಿಸಿದಂತೆ, ಕನ್ನಡಕ್ಕೆ ಕೆಲವನ್ನು ಪರಿವರ್ತಿಸಿಯೂ ಇದ್ದಾರೆ. ಕೆಲವು ಮೂಲಕ್ಕಿಂತ ಸುಂದರವಾಗಿವೆಯೆಂದು ಹೊಗಳಿಸಿಕೊಂಡಿವೆ. ಸಾಹಿತ್ಯ ಸಂಶೋಧನೆ ಮಾಡಿದ್ದಾರೆ. ಅವನ್ನೆಲ್ಲ ವಿದ್ವಾಂಸರು ಒರೆಹಚ್ಚಿ ನಿರ್ಣಯಿಸಬೇಕಾಗಿದೆ. ಮಾತೃಭೂಮಿಯನ್ನು ಬಿಟ್ಟು ಬಂದು ಪರನಾಡಿನಲ್ಲಿ ಹೇಗಿರಬೇಕೆಂಬ ಮಾತಿಗೆ ಆದರ್ಶ ಸ್ವರೂಪರಾದವರಲ್ಲಿ ಅವರೂ ಒಬ್ಬರು. ಅವರು, ಕನ್ನಡ ತಾಯಿಯ ವಿರಾಟ್ ಸ್ವರೂಪದಲ್ಲಿ ಕಂಡು ಬರುವ ಸಾವಿರ ಮುಖಗಳಲ್ಲಿ ತಾವೊಬ್ಬರೆಂದು ಹೇಳಿಕೊಂಡರೂ, ಅವರ ಒಂದು ಮುಖವೇ ನಮಗೆ ಬಹುಮುಖವಾಗಿ ಕಂಗೊಳಿಸುತ್ತಿರುವುದನ್ನು ನೆನೆದರೆ, ಅವರ ವಾಮನಮೂರ್ತಿಯ ಹಿನ್ನೆಲೆಯನ್ನು ವಂದಿಸಬೇಕೆನಿಸುತ್ತದೆ. ಆ ಮೂರ್ತಿಯು ಕನ್ನಡಿಗರ ಏಕೀಕರಣ, ಕನ್ನಡ ಏಕೀಕರಣ, ಕರ್ನಾಟಕ ಏಕೀಕರಣಗಳನ್ನು ತನ್ನ ಮೂರು ಹೆಜ್ಜೆಗಳನ್ನು ಊರುವದರೊಳಗಾಗಿ ಒದಗಿಸಿಕೊಡದಿದ್ದರೂ, ಆ ಹಿರಿಯ ಕಾರ್ಯವು ಈಗ ಅವ್ಯಾಹತವಾಗಿ ಸಾಗಿವಂತೆ ಮುಂದೆಯೂ ಇಮ್ಮಡಿ ನಾಲ್ಮಡಿ ವೇಗದಿಂದ ಅದು ಸಾಗಲೆಂದು ಹಾರಯಿಸುತ್ತೇನೆ.

ನನ್ನಂಥವನು ಸಣ್ಣ ಬಾಯಿಂದ ದೊಡ್ಡ ತುತ್ತುನುಂಗುವ 'ದತ್ತ ಸಾಹಿತ್ಯ'ವನ್ನು ಕುರಿತು ಈ ಸಾಹಸ ಮಾಡಿರುವುದಕ್ಕೆ ನಾಡಿಗರು ಮನ್ನಿಸಲೆಂದು ಕೇಳುತ್ತೇನೆ.

---